

# ಕನ್ನಡ ಸಾಹಿತ್ಯ

1
ಸಂಚಿಕೆ

# ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ



ಎಂಪಿಪಿ

MPP

MASTER'S PREPARATORY PROGRAMME

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮಾನಸ ಗಂಗೋತ್ರಿ, ಮೈಸೂರು - 570 006

ಉನ್ನತ ಶಿಕ್ಷಣಕ್ಕಾಗಿ ಇರುವ ಅವಕಾಶಗಳನ್ನು ಹೆಚ್ಚಿಸುವುದಕ್ಕೆ ಮತ್ತು ಶಿಕ್ಷಣವನ್ನು ಪ್ರಜಾತಂತ್ರೀಕರಿಸುವುದಕ್ಕೆ ಮುಕ್ತ ವಿಶ್ವವಿದ್ಯಾನಿಲಯ ವ್ಯವಸ್ಥೆಯನ್ನು ಆರಂಭಿಸಲಾಗಿದೆ.

**ರಾಷ್ಟ್ರೀಯ ಶಿಕ್ಷಣ ನೀತಿ 1986**

*The Open University system has been initiated in order to augment opportunities for higher education and as instrument of democrating education.*

***National Education Policy 1986***

ಮುಕ್ತ ವಿಶ್ವವಿದ್ಯಾನಿಲಯವು ದೂರಶಿಕ್ಷಣ ಪದ್ಧತಿಯಲ್ಲಿ ಬಹುಮಾಧ್ಯಮಗಳನ್ನು ಉಪಯೋಗಿಸುತ್ತದೆ. ............................ವಿದ್ಯಾಕಾಂಕ್ಷಿಗಳನ್ನು ಜ್ಞಾನ ಸಂಪಾದನೆಗಾಗಿ ಕಲಿಕಾ ಕೇಂದ್ರಕ್ಕೆ ಕೊಂಡೊಯ್ಯುವ ಬದಲು, ಜ್ಞಾನ ಸಂಪತ್ತನ್ನು ವಿದ್ಯೆ ಕಲಿಯುವವರ ಬಳಿ ಕೊಂಡೊಯ್ಯುವ ವಾಹಕವಾಗಿದೆ.

**ಡಾ. ಕುಳಂದೈಸ್ವಾಮಿ**

*"The Open University system makes use of Multimedia in distance education system. .............................. it is vehicle which transports knowledge to the place of learners rather than transport to the place of learning.*

***Dr. Kulandai Swamy***

## ವಿಶ್ವಮಾನವ ಸಂದೇಶ

ಪ್ರತಿಯೊಂದು ಮಗುವು ಹುಟ್ಟುತ್ತಲೇ - ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು 'ಅಲ್ಪ ಮಾನವ'ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

ಮನುಜ ಮತ, ವಿಶ್ವ ಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಈ ಪಂಚಮಂತ್ರ ಇನ್ನು ಮುಂದಿನ ದೃಷ್ಟಿಯಾಗಬೇಕಾಗಿದೆ. ಅಂದರೆ, ನಮಗೆ ಇನ್ನು ಬೇಕಾದುದು ಆ ಮತ ಈ ಮತ ಅಲ್ಲ; ಮನುಜ ಮತ. ಆ ಪಥ ಈ ಪಥ ಅಲ್ಲ; ವಿಶ್ವ ಪಥ. ಆ ಒಬ್ಬರ ಉದಯ ಮಾತ್ರವಲ್ಲ; ಸರ್ವರ ಸರ್ವಸ್ತರದ ಉದಯ. ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ; ಸಮನ್ವಯಗೊಳ್ಳುವುದು. ಸಂಕುಚಿತ ಮತದ ಆಂಶಿಕ ದೃಷ್ಟಿ ಅಲ್ಲ; ಭೌತಿಕ ಪಾರಮಾರ್ಥಿಕ ಎಂಬ ಭಿನ್ನದೃಷ್ಟಿ ಅಲ್ಲ; ಎಲ್ಲವನ್ನು ಭಗವದ್ ದೃಷ್ಟಿಯಿಂದ ಕಾಣುವ **ಪೂರ್ಣದೃಷ್ಟಿ.**

ಕುವೆಂಪು

## *Gospel of Universal Man*

Every Child, at birth, is the universal man. But, as it grows, we turn it into "a petty man". It should be the function of education to turn it again into the enlightened "universal man".

The Religion of Humanity, the Universal Path, the Welfare of All, Reconciliation, the Integral Vision- these ***five mantras*** should become View of the Future. In other words, what we want henceforth is not this religion or that religion, but the Religion of Humanity ; not this path or that path, but the Universal Path ; not the well-being of this individual or that individual, but the Welfare of All ; not turning away and breaking off from one another, but reconciling and uniting in concord and harmony ; and, above all, not the partial view of a narrow creed, not the dual outlook of the material and the spiritual, but the Integral Vision of seeing all things with the eye of the Divine.

*Kuvempu*



**ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ**
ಮಾನಸ ಗಂಗೋತ್ರಿ
ಮೈಸೂರು - 570 006

**ಎಂ.ಪಿ.ಪಿ.**
**ಕನ್ನಡ ಸಾಹಿತ್ಯ**

| ಸಂಚಿಕೆಗಳು | | ವಿಷಯಗಳು |
|---|---|---|
| 1 | ಕನ್ನಡ ಸಾಹಿತ್ಯ ಚರಿತ್ರ<br>ಹಳಗನ್ನಡ ಸಾಹಿತ್ಯ<br>ಚಂಪೂ ಸಾಹಿತ್ಯ - ವಚನ ಸಾಹಿತ್ಯ | ಘಟಕ - 1 ಕನ್ನಡ ಸಾಹಿತ್ಯದ ಪ್ರಾಚೀನತೆ<br>ಘಟಕ - 2 ೧ನೇ ನಾಗವರ್ಮ,ನಾಗಚಂದ್ರ,ನಯಸೇನ,ನೇಮಿಚಂದ್ರ,ರುದ್ರಭಟ್ಟ,ಜನ್ನ ಮತ್ತು ಆಂಡಯ್ಯ<br>ಘಟಕ - 3 ವಚನ ಸಾಹಿತ್ಯ : ಹಿನ್ನೆಲೆ, ಉಗಮ, ಬೆಳವಣಿಗೆ, ಲಕ್ಷಣ<br>ಘಟಕ - 4 ಪ್ರಮುಖ ವಚನಕಾರರು, ವಚನ ಸಾಹಿತ್ಯದ ಕೊಡುಗೆ |
| 2 | ಕನ್ನಡ ಸಾಹಿತ್ಯ ಚರಿತ್ರ<br>ನಡುಗನ್ನಡ ಸಾಹಿತ್ಯ | ಘಟಕ - 1 ರಗಳೆ : ಸ್ವರೂಪ, ಪ್ರಭೇದಗಳು<br>ಘಟಕ - 2 ಕವಿ ಹರಿಹರ ಮತ್ತು ಆತನ ಕೃತಿಗಳು<br>ಘಟಕ - 3 ಷಟ್ಪದಿ ಸಾಹಿತ್ಯ - ಪರಿಚಯ, ರಾಘವಾಂಕ : ಕವಿ, ಕೃತಿಗಳು<br>ಘಟಕ - 4 ಷಟ್ಪದಿ ಕವಿಗಳು : ಕುಮಾರವ್ಯಾಸ, ಚಾಮರಸ, ಕುಮಾರವಾಲ್ಮೀಕಿ |
| 3 | ಕನ್ನಡ ಸಾಹಿತ್ಯ ಚರಿತ್ರ<br>ನಡುಗನ್ನಡ ಸಾಹಿತ್ಯ | ಘಟಕ - 1 ದಾಸ ಸಾಹಿತ್ಯ : ಶ್ರೀಪಾದರಾಜರು, ಪುರಂದರ, ಕನಕ, ಜಗನ್ನಾಥದಾಸರು ಮೊದಲಾದವರು<br>ಘಟಕ - 2 ತ್ರಿಪದಿ ಸಾಹಿತ್ಯ : ಪರಿಚಯ, ಸರ್ವಜ್ಞ ಕವಿ<br>ಘಟಕ - 3 ಸಾಂಗತ್ಯ ಸಾಹಿತ್ಯ - ೧ : ದೇಪರಾಜ, ಶಿಶುಮಾಯಣ, ನಿಜಗುಣಶಿವಯೋಗಿ, ಕನಕದಾಸರು<br>ಘಟಕ - 4 ಸಾಂಗತ್ಯ ಸಾಹಿತ್ಯ - ೨ : ನಂಜುಂಡ ಕವಿ, ರತ್ನಾಕರವರ್ಣಿ, ಸಂಚಿಯ ಹೊನ್ನಮ್ಮ |
| 4 | ಕನ್ನಡ ಸಾಹಿತ್ಯ ಚರಿತ್ರ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಹೊಸಗನ್ನಡದ ಅರುಣೋದಯ : ಭಾಗ - ೧<br>ಘಟಕ - 2 ಹೊಸಗನ್ನಡ ಅರುಣೋದಯ : ಭಾಗ - ೨<br>ಘಟಕ - 3 ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯ<br>ಘಟಕ - 4 ನವ್ಯ ಮತ್ತು ದಲಿತ ಬಂಡಾಯ ಸಾಹಿತ್ಯ |
| 5 | ಕನ್ನಡ ಸಾಹಿತ್ಯ ಚರಿತ್ರ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಭಾವಗೀತೆ, ಕಾದಂಬರಿ<br>ಘಟಕ - 2 ಸಣ್ಣ ಕಥೆ : ಸ್ವರೂಪ, ಲಕ್ಷಣ ಮತ್ತು ಇತಿಹಾಸ<br>ಘಟಕ - 3 ನಾಟಕ : ವಸ್ತು, ಸಂವಿಧಾನ, ರಂಗಭೂಮಿ, ನಾಟಕ ಪರಂಪರೆ<br>ಘಟಕ - 4 ಪ್ರಬಂಧ, ವಿಮರ್ಶೆ |
| 6 | ಛಂದಸ್ಸು | ಘಟಕ - 1 ಲಯ, ಯತಿ, ಪ್ರಾಸ, ಪಾದ, ಮಾತ್ರಾಗಣ ಸ್ವರೂಪ, ಕನ್ನಡ ಛಂದೋಗ್ರಂಥಗಳ ಪರಿಚಯ<br>ಘಟಕ - 2 ವರ್ಣವೃತ್ತಗಳು, ಖ್ಯಾತ ಕರ್ಣಾಟಕಗಳು; ಮಾತ್ರಾವೃತ್ತಗಳು, ಕಂದ, ರಗಳೆ;ಅಂಶವೃತ್ತಗಳು<br>ಘಟಕ - 3 ಹೊಸಗನ್ನಡ ಛಂದಸ್ಸು - ೧ : ಗಣವಿನ್ಯಾಸ, ಪ್ರಯೋಗಗಳು, ಸ್ವರಾಘಾತ, ಗಣಪರಿವೃತ್ತಿ<br>ಘಟಕ - 4 ಹೊಸಗನ್ನಡ ಛಂದಸ್ಸು - ೨ : ಮಾತ್ರೆ, ಮುಡಿ, ಪದ್ಯಗಣ |
| 7 | ಭಾರತೀಯ ಕಾವ್ಯಮೀಮಾಂಸೆ | ಘಟಕ - 1 ಮೀಮಾಂಸೆಯ ಉಗಮ, ಕಾವ್ಯದ ಆಕರ, ಪರಿಕರ, ಸಹೃದಯ, ಕಾವ್ಯ ಲಕ್ಷಣ ಇತ್ಯಾದಿ<br>ಘಟಕ - 2 ಪ್ರಸ್ಥಾನಗಳು : ಅಲಂಕಾರ, ರೀತಿ, ಧ್ವನಿ , ಔಚಿತ್ಯ, ಮೀಮಾಂಸಕರು<br>ಘಟಕ - 3 ರಸಸಿದ್ಧಾಂತ, ರಸಪ್ರಭೇದಗಳು<br>ಘಟಕ - 4 ಧ್ವನಿ ಸಿದ್ಧಾಂತ, ಧ್ವನಿ ಪ್ರಭೇದಗಳು<br>ಘಟಕ - 5 ಔಚಿತ್ಯ ತತ್ವ |
| 8 | ಸಾಹಿತ್ಯ ವಿಮರ್ಶೆ | ಘಟಕ - 1 ಪಾಶ್ಚಿಮಾತ್ಯ ವಿಮರ್ಶಕರ ಪರಿಚಯ, ವಿಮರ್ಶೆಯ ಪರಿಚಯ<br>ಘಟಕ - 2 ವಿಮರ್ಶೆಯ ಸ್ವರೂಪ<br>ಘಟಕ - 3 ವಿಮರ್ಶೆಯ ವಿಧಾನಗಳು - 1<br>ಘಟಕ - 4 ವಿಮರ್ಶೆಯ ವಿಧಾನಗಳು - 2 |
| 9 | ಕನ್ನಡ ಭಾಷೆಯ ಚರಿತ್ರೆ | ಘಟಕ - 1 ಭಾಷೆ : ಸ್ವರೂಪ, ಲಕ್ಷಣ, ವರ್ಗೀಕರಣ, ದ್ರಾವಿಡ ಭಾಷೆಗಳು, ದ್ರಾವಿಡ ಭಾಷಾವರ್ಗೀಕರಣ<br>ಘಟಕ - 2 ಕನ್ನಡ ಕರ್ಣಾಟಕ ಶಬ್ದ ನಿಷ್ಪತ್ತಿ, ಕನ್ನಡ ಸಂಸ್ಕೃತ - ಸಂಬಂಧ, ಪ್ರಾಂತ ಭೇದಗಳು ಇತ್ಯಾದಿ<br>ಘಟಕ - 3 ವರ್ಣಮಾಲೆ, ನಾಮಪದ, ಲಿಂಗ, ವಚನ, ವಿಭಕ್ತಿ, ಕ್ರಿಯಾಪದ, ಗುಣವಾಚಕ, ಅವ್ಯಯ ಇತ್ಯಾದಿ<br>ಘಟಕ - 4 ಶಬ್ದಕೋಶ ಬೆಳವಣಿಗೆ, ದೇಶ್ಯ - ಅನ್ಯದೇಶ್ಯ ಪದಗಳು |
| 10 | ವ್ಯಾಕರಣ | ಘಟಕ - 1 ಶಬ್ದಮಣಿದರ್ಪಣಂ : ವ್ಯಾಕರಣ ಪರಿಚಯ, ವರ್ಣಮಾಲೆ<br>ಘಟಕ - 2 ಸಂಧಿಪ್ರಕರಣ, ನಾಮಪ್ರಕರಣ<br>ಘಟಕ - 3 ಸಮಾಸ ಪ್ರಕರಣ, ತದ್ಧಿತ ಪ್ರಕರಣ<br>ಘಟಕ - 4 ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಪ್ರಕರಣ |

## ಸಂಚಿಕೆ - 1

## ಹಳಗನ್ನಡ ಸಾಹಿತ್ಯ (ಚಂಪೂ ಸಾಹಿತ್ಯ - ವಚನ ಸಾಹಿತ್ಯ)

## ಪಠ್ಯಕ್ರಮ ವಿನ್ಯಾಸ ಮತ್ತು ಸಂಪಾದಕ ಮಂಡಳಿ


ಪ್ರೊ.ಕೆ.ಸುಧಾರಾವ್

ಕುಲಪತಿಗಳು ಮತ್ತು ಅಧ್ಯಕ್ಷರು

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಡೀನ್ (ಶೈಕ್ಷಣಿಕ) ಸಮಾವೇಶಕರು

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

**ಪ್ರೊ. ಬಿ.ಎನ್. ನಾಗರಾಜ ಭಟ್** — ಸಂಪಾದಕರು

ಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,
ಮೈಸೂರು.

**ಡಾ. ಡಿ.ಟಿ. ಬಸವರಾಜ್** — ಸಂಪಾದಕರು / ಸಂಯೋಜಕರು

ಅಧ್ಯಕ್ಷರು,
ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,
ಮೈಸೂರು.


## ಪಠ್ಯಕ್ರಮ ನಿರೂಪಕರು — ಸಂಚಿಕೆ - 1


**ಪ್ರೊ. ಬಿ.ಎನ್. ನಾಗರಾಜ ಭಟ್** — ಘಟಕ 1 ಮತ್ತು 2

ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

**ಡಾ. ಎಲ್. ರಾಜಶೇಖರಯ್ಯ** — ಘಟಕ 3 ಮತ್ತು 4

ಪ್ರವಾಚಕರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.


## ಪ್ರಕಾಶಕರು


ಶ್ರೀ ವಿ. ರಾಮಣ್ಣ

ಕುಲಸಚಿವರು (ಆಡಳಿತ)

ಕ.ರಾ.ಮು.ವಿ.,ಯ ಶೈಕ್ಷಣಿಕ ವಿಭಾಗದಿಂದ ಸಿದ್ಧಪಡಿಸಲಾಗಿದೆ.





ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಕೋರ್ಸ್‌ಗಳ ಹೆಚ್ಚಿನ ವಿವರಗಳಿಗೆ
ವಿಶ್ವವಿದ್ಯಾನಿಲಯದ ಕಾರ್ಯಾಲಯ, ಮಾನಸಗಂಗೋತ್ರಿ, ಮೈಸೂರು - 570 006 ಇಲ್ಲಿಂದ ಪಡೆಯಬಹುದು.

ಪ್ರಿಯ ವಿದ್ಯಾರ್ಥಿ,

ಕನ್ನಡ ಎಂ.ಎ., ವ್ಯಾಸಂಗಕ್ಕಾಗಿ ನಮ್ಮ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆದಿರುವ ತಮ್ಮನ್ನು ನಮ್ಮ ಕನ್ನಡ ವಿಭಾಗದ ಅಧ್ಯಾಪಕ ವೃಂದ ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ.

ತಮ್ಮ ಕೈಯಲ್ಲಿರುವ ಈ ಸಾಮಗ್ರಿಯು ನಮ್ಮಲ್ಲಿ 'ಮುಕ್ತ' ಪದ್ಧತಿಯಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳಿಗೆಂದೇ ವಿಶೇಷವಾಗಿ ಸಿದ್ಧಪಡಿಸಿದುದಾಗಿದೆ. ತಾವು ತಮ್ಮ ಸ್ವಂತ ಇಚ್ಛೆ ಮತ್ತು ಪರಿಶ್ರಮದಿಂದ ಕನ್ನಡ ಸಾಹಿತ್ಯವನ್ನು ವ್ಯಾಪಕವಾಗಿ ಓದಿಕೊಂಡಿದ್ದೀರಿ ಮತ್ತು ಅಭಿಮಾನವನ್ನೂ ಬೆಳೆಸಿಕೊಂಡಿದ್ದೀರಿ ಎಂದು ಭಾವಿಸಿದ್ದೇವೆ. ಇದನ್ನು ತುಂಬು ಮನಸ್ಸಿನಿಂದ ತಾವು ಗೌರವಿಸುತ್ತೇವೆ ಕೂಡ. ಈ ಬಗೆಯಲ್ಲಿ ತಾವು ಓದುವಿಕೆಯನ್ನು ಮಾಡಿದವರಾಗಿದ್ದರೂ ಅದು ಕೆಲವೊಮ್ಮೆ ಒಂದು ಶಿಸ್ತಿಗೆ ಒಳಪಟ್ಟ ಅಧ್ಯಯನವಾಗದೆಯೂ ಇರಬಹುದು. ಇಂತಹ ಸ್ಥಿತಿಯಿಂದ ನಿರ್ದಿಷ್ಟ ಶಿಸ್ತಿನ ಪದ್ಧತಿಗೆ ಪ್ರವೇಶ ಪಡೆದಾಗ ತಮಗೆ ಕೆಲಮಟ್ಟಿಗೆ ಶೈಕ್ಷಣಿಕ ತೊಡಕು (ಕೆಲವರಿಗಾದರೂ) ಎದುರಾಗಬಹುದು. ಈ ಕೊರತೆಯನ್ನು ನೀಗುವ ಸಲುವಾಗಿ ***'ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ'*** **[ *Master's Degree Preparatory Programe (MPP)* ]** ವನ್ನು ಮುಕ್ತಪದ್ಧತಿಯ ವಿದ್ಯಾರ್ಥಿಗಳಿಗೆ ರೂಪಿಸಲಾಗಿದೆ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯಲ್ಲಿ ಒಬ್ಬ ವಿದ್ಯಾರ್ಥಿ (ಬಿ.ಎ., ಪದವಿಯವರೆಗೆ) ವ್ಯಾಸಂಗ ಮಾಡಿರುವ ವಸ್ತು-ವಿಷಯಗಳ ಸ್ಥೂಲ ಮಾಹಿತಿಯನ್ನು ಈ (ಎಂಪಿಪಿ) ಸಾಮಗ್ರಿಯಲ್ಲಿ ಅಳವಡಿಸಲಾಗಿದೆ. ಮುಕ್ತ ಪದ್ಧತಿಯಲ್ಲಿ ಪ್ರವೇಶ ಪಡೆದ ತಮಗೆ ಈ ಸಾಮಗ್ರಿಯು ಕನ್ನಡ ಎಂ.ಎ. ವ್ಯಾಸಂಗಕ್ಕೆ ಸೂಕ್ತ ತಳಹದಿಯನ್ನು ನೀಡುವುದರೊಂದಿಗೆ ಆತ್ಮವಿಶ್ವಾಸವನ್ನು ಮೂಡಿಸುತ್ತದೆ.

ಕನ್ನಡ ಸಾಹಿತ್ಯ ಕುರಿತ 10 ಸಂಚಿಕೆಗಳಲ್ಲಿ ಇದು 1 ನೆಯದು. ಇದರಲ್ಲಿ ಹಳಗನ್ನಡದ ಕವಿ ಕೃತಿಗಳನ್ನು ಪ್ರಸ್ತಾಪಿಸಲಾಗಿದೆ. ಮುಖ್ಯವಾಗಿ ಚಂಪೂಕವಿ ಕಾವ್ಯಗಳನ್ನು ಕುರಿತ ವಿವರಗಳು ಇಲ್ಲಿವೆ. ಅಲ್ಲದೆ ವಚನಸಾಹಿತ್ಯ ಹಾಗೂ ಪ್ರಮುಖ ವಚನಕಾರರ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.

ಈ ಸಾಮಗ್ರಿಯಲ್ಲಿನ ವಿಷಯಗಳನ್ನು ಸೂಕ್ಷ್ಮವಾಗಿ ತಾವು ಓದಬೇಕು, ಒಂದೊಂದು ಅಂಕಗಳಿಗೆ ಉತ್ತರಿಸಬಹುದಾದ 'ವಸ್ತುನಿಷ್ಠ' (Objective Type) ಪ್ರಶ್ನೆಗಳನ್ನು ತಾವೇ ಸಿದ್ಧಪಡಿಸಿಕೊಂಡು ಉತ್ತರಗಳನ್ನು ಕಂಡುಕೊಂಡು ಈ ಸಾಮಗ್ರಿ ಕುರಿತ ಪರೀಕ್ಷೆಗೆ ಸಿದ್ಧವಾಗಬೇಕು ಎಂದು ಸೂಚಿಸುತ್ತ; ಈ ಸಾಮಗ್ರಿಯ ಓದು ತಮಗೆ ಉದ್ದಿಷ್ಟಫಲವನ್ನು ನೀಡಲಿ ಎಂದು ಆಶಿಸುತ್ತೇವೆ.

ಅಧ್ಯಾಪಕ ವೃಂದದ ಪರವಾಗಿ
ತಮ್ಮ ವಿಶ್ವಾಸಿ
**ಡಾ. ಡಿ.ಟಿ. ಬಸವರಾಜ್**
ಅಧ್ಯಕ್ಷರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

# ಸಂಚಿಕೆ - 1
# ಕನ್ನಡ ಸಾಹಿತ್ಯ ಚರಿತ್ರೆ - ಹಳಗನ್ನಡ ಸಾಹಿತ್ಯ

## ಘಟಕ - 1
## ಕನ್ನಡ ಸಾಹಿತ್ಯದ ಪ್ರಾಚೀನತೆ

ಪರಿವಿಡಿ :

## 1.0 ಘಟಕದ ಉದ್ದೇಶ

- ಕನ್ನಡದ ಪ್ರಾಚೀನತೆಯನ್ನು ತಿಳಿದುಕೊಳ್ಳುವುದು
- ಕನ್ನಡ ನಾಡಿನ ಸಂಸ್ಕೃತಿ, ಭಾಷೆ, ಕವಿಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಪಡೆಯುವುದು
- ಚಿಂತನೆ, ಅಧ್ಯಾತ್ಮ, ಪಂಥ, ಮತಗಳ ಬಗ್ಗೆ ಹೆಚ್ಚು ವಿಷಯವನ್ನು ಸಂಗ್ರಹಿಸುವುದು

## 1.1 ಪೀಠಿಕೆ

ಇತಿಹಾಸವನ್ನು ಅಧ್ಯಯನ ಮಾಡುವವರು ಸಾಹಿತ್ಯವನ್ನು ಗಂಭಿರವಾಗಿ ಪರಿಗಣಿಸುವುದಿಲ್ಲ. ಆದರೆ ಸಾಹಿತ್ಯವನ್ನು ಅಧ್ಯಯನ ಮಾಡುವವರು ಒಂದು ದೇಶದ ಸಮಗ್ರ ಸಂಗತಿಗಳನ್ನು ಪರಿಶೀಲಿಸುತ್ತಾರೆ. ಕಾರಣ ಒಂದು ಸಾಹಿತ್ಯ ಕೃತಿ ಆ ಕಾಲದ ಯುಗ ಮೌಲ್ಯಗಳನ್ನು, ಚಿಂತನೆಗಳನ್ನು ತನ್ನದಾಗಿಸಿಕೊಂಡಿರುತ್ತದೆ. ತನ್ಮೂಲಕ ಅದನ್ನು ತಿದ್ದುವ, ಹೊಸದನ್ನು ಸೃಜಿಸುವ, ಬೆಲೆಕಟ್ಟುವ ಕೆಲಸವನ್ನು ತನ್ನ ಕೃತಿಯೊಳಗೆ ಲೇಖಕ ಮಾಡಿರುತ್ತಾನೆ.

ಸಾಹಿತ್ಯ ಚರಿತ್ರೆಯಾದರೊ ಆ ದೇಶದ ಆತ್ಮಕಥೆ. ದೇಶದ ಆತ್ಮ ವಿಕಸನದ ಕತೆಯನ್ನು ಸಾಹಿತ್ಯ ವಿಶದವಾಗಿ, ಮನೋಹರವಾಗಿ ನಿರೂಪಿಸುತ್ತದೆ. ಜನ ಸಾಮಾನ್ಯರಿಗೆ ಭರತ ಖಂಡದ ಲೌಕಿಕ ಚರಿತ್ರೆಯ ಪರಿಜ್ಞಾನ ಇರಬಹುದು, ಇಲ್ಲದಿರಬಹುದು. ಆದರೆ ಅವರ ಆತ್ಮಕಥೆ ಮಾತ್ರ ಅವರಿಗೆ ಚೆನ್ನಾಗಿ ತಿಳಿದಿದೆ. ಅದೇ ಸಂಸ್ಕೃತಿಯ ಸಾರವಾಗಿದೆ. ಇವು ಅದರ ಆತ್ಮಕಥೆ, ಜನತೆಯ ಹೃದಯದಲ್ಲಿ ಇವು ಸಹಸ್ರಾರು ವರ್ಷಗಳಿಂದ ನಿಂತು ರಕ್ತಗತವಾಗಿ ಹೋಗಿದೆ.

ಒಂದು ಜನಾಂಗದ ಆತ್ಮ ಪರಿಚಯ ಮಾಡಿಕೊಳ್ಳಬೇಕಾದರೆ ಅದರ ಸಾಹಿತ್ಯಾಭ್ಯಾಸ ಒಂದೇ ರಾಜಮಾರ್ಗ. ಸಾಹಿತ್ಯಾಭ್ಯಾಸಕ್ಕೆ ಸರಿಯಾದ ಕೈಪಿಡಿಯಾಗಿ ಸಾಹಿತ್ಯ ಚರಿತ್ರೆ ಕೆಲಸ ಮಾಡುತ್ತದೆ.

## 1.2 ಸಾಹಿತ್ಯ ರಚನಾ ವಿಧಾನಗಳು

ಸಾಹಿತ್ಯ ಇದ್ದಕ್ಕಿದ್ದಂತೆ ಹುಟ್ಟಿದ್ದಲ್ಲ. ಪ್ರಾಗೈತಿಹಾಸಿಕ ಕಾಲದಲ್ಲಿ ಪ್ರಾಣಿ ಜೀವನದಿಂದ ಮನುಷ್ಯ ಜೀವನ ಕ್ರಮಕ್ಕೆ ಮನುಷ್ಯ ಬದಲಾಗುತ್ತಿದ್ದ ಹಂತದಲ್ಲಿ ಮನುಷ್ಯ ತನ್ನ ಅನಿಸಿಕೆಗಳನ್ನು ವ್ಯಕ್ತಪಡಿಸುವ ಸಂಜ್ಞಾಕ್ರಮದಿಂದ ಧ್ವನಿಯನ್ನು ಅನುಕರಣಕ್ಕೆ ಬಳಸುವ ಮೂಲಕ ಹೊಸ ಹೊಸ ಅಭಿವ್ಯಕ್ತಿಗೆ ಅವಕಾಶ ಮಾಡಿಕೊಟ್ಟಿದೆ. ಕಂಡಿದ್ದನ್ನು ತಿನ್ನುವ, ಭೋಗಿಸುವ ಪ್ರವೃತ್ತಿಯಿಂದ ಕ್ರಮೇಣ ಸಾಮೂಹಿಕ ಬದುಕಿನ ವಿನ್ಯಾಸ ಅನಿವಾರ್ಯವಾದಂತೆ ಪರಸ್ಪರ ಸಂವಹನ ಕ್ರಮವೂ ಅನಿವಾರ್ಯವಾದ ಹಂತದಲ್ಲಿ ಭಾಷೆ ಆಕಾರ ಪಡೆಯಿತು.

ಭಾಷೆಯ ಮೂಲಕ ತನ್ನ ಬದುಕಿನ ಏಕತಾನತೆಯನ್ನು ನೀಗಿಕೊಳ್ಳಲು ಹಾಡು, ಕುಣಿತ, ಕತೆಗಳ ಮೂಲಕ ಬದುಕಿಗೆ ಒಂದು ಸೌಂದರ್ಯವನ್ನು ತಂದುಕೊಳ್ಳುವ ಸಾಧ್ಯತೆಯನ್ನುಕಂಡುಕೊಂಡ. ಕೇವಲ ಲಯ ಹಿಡಿದು ಕೂಗುತ್ತ ಕ್ರಮೇಣ ಲಯಕ್ಕೆ ಚಿಕ್ಕ ಚಿಕ್ಕ ಪದಗಳನ್ನುಸೇರಿಸುತ್ತ ಕುಣಿತದೊಂದಿಗೆ ಅದನ್ನು ವಿಸ್ತರಿಸುತ್ತ, ಕುಲ ದೇವತಾರಾಧನೆಯಲ್ಲಿ ಅಥವಾ ಸಾಮಾಜಿಕ ಮನೋರಂಜನೆಯಲ್ಲಿ ಸುಖ ಕಾಣಲು ಆರಂಭಿಸಿದ.ಇದರ ಪರಿಣಾಮವೇ ಜಾನಪದದ ಸೃಷ್ಟಿ. ಕ್ರಮೇಣ ಭಾಷೆ ಬೆಳೆಯುತ್ತ, ಸಾಹಿತ್ಯ ಬೆಳೆಯುತ್ತ, ವಿಭಿನ್ನ ಅನುಭವಗಳನ್ನು ಒಳಗೊಳ್ಳುತ್ತ ಸಾಗಿದಂತೆಲ್ಲ ಕಲೆಯ ಒಂದು ಪ್ರಕಾರಕ್ಕೆ ನಾಂದಿಯಾಯಿತು.

ಮೌಖಿಕ ಪರಂಪರೆ ಕ್ರಮೇಣ ವಿಸ್ತಾರಗೊಳ್ಳುತ್ತ ಜನಾಂಗದಿಂದ ಜನಾಂಗಕ್ಕೆ, ದೇಶದಿಂದ ದೇಶಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ ಬೆಳೆಯುತ್ತ ಹರಡುತ್ತ ಸಾಗಿದ್ದನ್ನು ನಾವು ಕಾಣುತ್ತೇವೆ.

## 1.3 ಸಾಹಿತ್ಯದ ಎರಡು ಶಾಖೆಗಳು

ಸಂವಹನಕ್ಕಾಗಿ ಹುಟ್ಟಿದ್ದ ಭಾಷೆ, ಮನೋರಂಜನೆಯ ಹಂತಕ್ಕೆ ಬೆಳೆದದ್ದು, ತನ್ಮೂಲಕ ತನ್ನ ಸಮಗ್ರ ಅಭಿವ್ಯಕ್ತಿಗೆ ಕಾರಣವಾದದ್ದು ಒಂದು ಮಹತ್ವದ ವಿಚಾರ. ಈ ಹಂತದಲ್ಲೇ ಮನುಷ್ಯ ಬರವಣಿಗೆಯನ್ನು ಕಂಡುಕೊಂಡ. ಗುಹೆಗಳಲ್ಲಿ ಪ್ರಕೃತಿ, ಪ್ರಾಣಿಗಳ ಚಿತ್ರವನ್ನು ಬಿಡುಸುತ್ತಿದ್ದ ಆದಿ ಮಾನವ ಕ್ರಮೇಣ ತಾನು ಆಡುವ ಭಾಷೆಗೆ ಒಂದು ಲಿಪಿಯನ್ನು ಕಂಡುಕೊಂಡ. ಹಾಗಾಗಿ ಲಿಪಿಯ ಮೂಲಕ ಅವನ ಅಭಿವ್ಯಕ್ತಿಯನ್ನು ಶಿಷ್ಟ ಸಾಹಿತ್ಯದ ವ್ಯಾಪ್ತಿಗೆ ತರುತ್ತೇವೆ. ಲಿಪಿಯಿಲ್ಲದ ಮುಖಾಮುಖಿಯಾಗಿರುವ ಮೌಖಿಕ ಪರಂಪರೆಯಿಂದ ಬಂದುದನ್ನು ಜನಪದ ಸಾಹಿತ್ಯವಾಗಿ ಪರಿಗಣಿಸುತ್ತೇವೆ.

### 1.3.0 ಮೌಖಿಕ ರೂಪ

ಆದಿ ಮಾನವನು ಬರವಣಿಗೆಯನ್ನು, ಲಿಪಿಯನ್ನು ಕಂಡುಕೊಳ್ಳುವ ಮುನ್ನ ತಮ್ಮ ಸಮಸ್ತ ಅಭಿವ್ಯಕ್ತಿಯನ್ನು ಸಂಜ್ಞೆಯಿಂದ ಭಾಷೆಯ ಮೂಲಕ ವ್ಯಕ್ತಪಡಿಸುವ ವಿಧಾನವನ್ನು ಕಂಡುಕೊಂಡ ನಂತರ ತಮ್ಮ ಸಮಸ್ತ ಅಭಿವ್ಯಕ್ತಿಯನ್ನು ಭಾಷಾ ಮಾಧ್ಯಮದಲ್ಲಿ ತೊಡಗಿಸಿಕೊಂಡದ್ದು ಭಾಷೆ ಬೆಳೆಯಲು ಸಹಕಾರಿಯಾಯಿತು. ಜೊತೆಗೆ ಭಾಷೆ ಹಾಡಿನ ರೂಪದಲ್ಲಿ, ಕತೆ, ಗೀತೆ, ಲಾವಣಿ ರೂಪದಲ್ಲಿ ಒಗಟು, ಗಾದೆ ರೂಪದಲ್ಲಿ ತಲೆಮಾರಿನಿಂದ ತಲೆಮಾರಿಗೆ, ಮುಖಾಮುಖಿಯಾಗಿ ಹರಿಯಲು ಶುರುವಾಯಿತು. ಜನಾಂಗದಿಂದ ಜನಾಂಗಕ್ಕೆ ತಲೆಮಾರಿನಿಂದ ತಲೆಮಾರಿಗೆ ಭಾಷೆಯ ಮೂಲಕ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಹರಿದು ಬಂದ ಈ ಬಗೆಯನ್ನೇ 'ಜಾನಪದ'ಎಂದು ಗುರುತಿಸುತ್ತೇವೆ.

### 1.3.1 ಕೃತಿ ರೂಪ

ಒಂದೊಂದು ದೇಶ, ಒಂದೊಂದು ಜನಾಂಗ, ಒಂದೊಂದು ಕಾಲಘಟ್ಟದಲ್ಲಿ ತಮ್ಮ ಭಾಷೆಯನ್ನು ರೂಪಿಸಿಕೊಂಡವು. ಯಾವಾಗ ಲಿಪಿಯನ್ನು ಕಂಡುಕೊಂಡು ತನ್ನ ಭಾಷೆಯ ಮೂಲಕ ತನ್ನ ಅನುಭವಗಳನ್ನು, ಪುರಾಣಗಳನ್ನು, ಸಾಹಸಗಳನ್ನು ಅದರಲ್ಲಿ ದಾಖಲಿಸಲು ಶುರುಮಾಡಿದಂದಿನಿಂದ ವ್ಯಷ್ಟಿ ರಚನೆ ಆರಂಭವಾಯಿತು. ಕರ್ತೃ ಕಾಣಿಸಿಕೊಂಡದ್ದು ಆಗ. ಅಲ್ಲಿವರೆಗೆ ಸಮಷ್ಟಿ ರಚನೆಯಿದ್ದದ್ದು ವ್ಯಷ್ಟಿ ರಚನೆಗೆ ನಾಂದಿಯಾಯಿತು. ಕೃತಿ ರೂಪ ತಾಳಲು ಅವಕಾಶವಾಯಿತು.

ಪೇಪರ್ ಇತ್ತೀಚೆಗಿನ ಸಾಧನ. ಕಲ್ಲು, ಲೋಹಗಳ ಮೂಲಕ ಮೊದಲು ಕಂಡುಕೊಂಡ ಬರವಣಿಗೆ ಸಾಧನ ಕ್ರಮೇಣ ಓಲೆಗರಿ, ಕಡತಗಳ ಮೂಲಕ ದಾಖಲಾಗಿ ಕ್ರಮೇಣ ಪೇಪರ್ ಮೂಲಕ ಅದರ ಉನ್ನತ ಸ್ಥಿತಿಯನ್ನು ಕಂಡುಕೊಂಡಿತ್ತು. ಈಗಂತು ಎಲೆಕ್ಟ್ರಾನಿಕ್ಸ್ ಮಾಧ್ಯಮದ ಮೂಲಕ ಅದರ ಪರಮೋಚ್ಚ ಸ್ಥಿತಿಯನ್ನು ಮುಟ್ಟಿದೆ.

## 1.4 ಸಾಹಿತ್ಯ ಚರಿತ್ರೆ

'ಸಾಹಿತ್ಯ'ವನ್ನು ಕೇಂದ್ರವಾಗಿಟ್ಟುಕೊಂಡು ಅದರ ಹುಟ್ಟು ಬೆಳವಣಿಗೆ ವ್ಯಾಪ್ತಿಯನ್ನು ಕುರಿತು ಚರ್ಚಿಸುತ್ತಾ ಅದರ ಕರ್ತೃವಿನ ವಿಚಾರವಾಗಿಯೂ ಪ್ರಸ್ತಾಪಿಸಬೇಕಾಗುತ್ತದೆ. 'ಸಾಹಿತ್ಯ' ಯಾವಾಗ, ಯಾರ ಕಾಲದಲ್ಲಿ, ಯಾರಿಂದ ರಚನೆಗೊಂಡಿತು ಎಂಬುದರ ಸವಿವರ ವ್ಯಾಖ್ಯಾನ ಸಾಹಿತ್ಯ ಚರಿತ್ರೆಯಲ್ಲಿರಬೇಕು. ಅನಂತರ ಆ ಕೃತಿಯ ಮೌಲ್ಯಮಾಪನವೂ ಅದರಲ್ಲಿರುತ್ತದೆ. 'ಸಾಹಿತ್ಯ

ಚರಿತ್ರೆ'ಒಂದು ದೇಶದ ಸಮಗ್ರ ಇತಿಹಾಸವನ್ನೆ ರಚಿಸಬಲ್ಲುದು. ಕಾಲಕಾಲಕ್ಕೆ ನಡೆದ ಸಮಗ್ರ ಚಿಂತನೆಯ ಸ್ವರೂಪವನ್ನು ಅದು ಒಳಗೊಂಡಿರುವುದರಿಂದ 'ಸಾಹಿತ್ಯ ಚರಿತ್ರೆ'ಇವುಗಳ ಇತಿಹಾಸವನ್ನು ದಾಖಲು ಮಾಡುತ್ತದೆ.

### 1.4.0 ಕವಿ ಚರಿತ್ರೆ

ಕನ್ನಡದಲ್ಲಿ ರಾ. ನರಸಿಂಹಾಚಾರ್ಯರು ಕವಿ ಚರಿತ್ರೆ ರಚಿಸಿದ್ದಾರೆ. ಆದರೆ ಸಾಹಿತ್ಯ ಚರಿತ್ರೆಗು ಕವಿ ಚರಿತ್ರೆಗೂ ವ್ಯತ್ಯಾಸ ಇಲ್ಲ. ಪಾಶ್ಚಾತ್ಯರಲ್ಲಿ ಕವಿ ಚರಿತ್ರೆಗೆ ವಿಶೇಷ ವಸ್ತುಗಳು ಲಭ್ಯ. ಕವಿ ಯಾವುದೋ ದೇಶದಲ್ಲಿ ಹುಟ್ಟಿ ಏನೇನೊ ವೃತ್ತಿ ಮಾಡುತ್ತ, ಎಲ್ಲೆಲ್ಲೋ ಅಲೆಯುತ್ತ ದೇಶದಿಂದ ದೇಶಕ್ಕೆ, ಖಂಡದಿಂದ ಖಂಡಕ್ಕೆ ಸುತ್ತಾಡುತ್ತ ಒಂದೆಡೆ ನೆಲೆನಿಲ್ಲದೆ ಅಥವಾ ನೆಲೆ ನಿಂತರೂ ವೈವಿಧ್ಯವಾದ, ವೈರುಧ್ಯವಾದ ಬದುಕನ್ನು ಸಾಗಿಸುತ್ತ ಹಲವಾರು ರೀತಿಯ, ವಿಭಿನ್ನ ರೀತಿಯ ಕೃತಿ ರಚಿಸಿಬಿಡುತ್ತಾನೆ. ಹಾಗಾಗಿ ಅಲ್ಲಿ ಕವಿಚರಿತ್ರೆಗೆ ಒಂದು ವಿಶೇಷ ಮಹತ್ವವಿದೆ. ನಮ್ಮ ಪ್ರಾಚೀನ ಕವಿಗಳ ಬದುಕು ಆ ಬಗೆಯಲ್ಲಿ ತೀವ್ರ ವೈರುಧ್ಯವಲ್ಲದ್ದರಿಂದ, ಪರಂಪರಾಗತವಾಗಿ ಬಂದ ಕ್ರಮದಲ್ಲೆ ಸಾಗುವುದರಿಂದ, ಜೊತೆಗೆ ಲೇಖಕರು ತಮ್ಮ ಬಗ್ಗೆ ಏನನ್ನು ಹೇಳಿಕೊಳ್ಳದ್ದರಿಂದ 'ಕವಿ ಚರಿತ್ರೆ' ಸಾಹಿತ್ಯ ಚರಿತ್ರೆಗಿಂತ ವಿಭಿನ್ನವಾಗಿ ಬರೆಯುವ ಅವಶ್ಯಕತೆಯೇ ಇಲ್ಲ. ಹಾಗಾಗಿ ರಾ. ನರಸಿಂಹಾಚಾರ್ಯರು ಕವಿ ಚರಿತ್ರೆ ಎಂದು ಬರೆದರೂ ಅದು ಸಾಹಿತ್ಯ ಚರಿತ್ರೆಯೇ ಆಗಿದೆ.

## 1.5 ಸಾಹಿತ್ಯ ಚರಿತ್ರೆ ವಿಭಾಗ ಕ್ರಮ

ಇಡೀ ಕನ್ನಡ ಸಾಹಿತ್ಯವನ್ನು ಹಲವಾರು ರೀತಿಯಲ್ಲಿ ಬೇರೆ ಬೇರೆ ವಿದ್ವಾಂಸರು ವಿಭಜಿಸಿದ್ದಾರೆ. ಆಯಾಯ ಕಾಲದಲ್ಲಿ ಪ್ರಸಿದ್ಧವಾದ ಕವಿ, ಅವನಿಂದ ಮುಂದಿನ ಕವಿಗಳು ಪ್ರಭಾವಿತರಾದುದನ್ನು ಗಮನಿಸಿ ಆ ಕವಿಯ ಹೆಸರಿನಿಂದ ಆ ಕಾಲ ಘಟ್ಟವನ್ನು ಕರೆದಿದ್ದಾರೆ. ಉದಾಹರಣೆಗೆ ಪಂಪ ಯುಗ, ಬಸವಯುಗ ಇತ್ಯಾದಿ. ಕೆಲವರು ಆ ಕಾಲದಲ್ಲಿ ಪ್ರಸಿದ್ಧವಾಗಿದ್ದ ಭಾಷಾ ಪ್ರಕಾರಗಳನ್ನು ಗಮನದಲ್ಲಿರಿಸಿಕೊಂಡು ಹಳಗನ್ನಡ, ನಡುಗನ್ನಡ ಇತ್ಯಾದಿಯಾಗಿ ಕರೆದಿದ್ದಾರೆ. ಇನ್ನು ಕೆಲವರು ಆ ಕಾಲದ ಮತ ಪ್ರಾಬಲ್ಯವನ್ನು ಗಮನದಲ್ಲಿಟ್ಟುಕೊಂಡು ಜೈನಯುಗ, ವೀರಶೈವಯುಗ, ಬ್ರಾಹ್ಮಣ ಯುಗ ಎಂಬುದಾಗಿ ಕರೆದಿದ್ದಾರೆ.

ಹದಿನಾಲ್ಕು ಬಗೆಯಲ್ಲಿ ಸಾಹಿತ್ಯದ ವಿಭಾಗ ಕಂಡು ಬರುತ್ತದೆ. ಆದರೆ ಒಂದಕ್ಕೆ ಒಂದು ಹೋಲಿಕೆಯಿದ್ದು ತೀರ ಭಿನ್ನವಾಗಿ ನಾಲ್ಕು ರೀತಿಯಲ್ಲಿ ವಿಂಗಡಿಸಿದ್ದು ಎದ್ದು ಕಾಣುವ ಅಂಶ. ಆದರೆ ಸರ್ವಸಮ್ಮತವಾದ ವಿಭಾಗ ಕ್ರಮ ಎಂದರೆ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸೂಚಿಸಿದ ಪ್ರಕಾರ ಅದು ಹೀಗಿದೆ:

ಆದಿಕಾಲದಿಂದ ಸುಮಾರು. ೮೫೦ರ ವರೆಗೆ

ಕ್ರಿ.ಶ. ಸುಮಾರು. ೮೫೦ -೧೧೫೦

ಕ್ರಿ.ಶ. ಸುಮಾರು. ೧೧೫೦-೧೩೫೦

ಕ್ರಿ.ಶ. ಸುಮಾರು. ೧೩೫೦-೧೬೫೦

ಕ್ರಿ.ಶ. ಸುಮಾರು. ೧೬೫೦-೧೮೫೦

ಕ್ರಿ.ಶ. ಸುಮಾರು. ೧೮೫೦-೧೯೨೦

ಸಾಹಿತ್ಯವನ್ನು ಒಂದು ಶಾಸ್ತ್ರೀಯ ಅಧ್ಯಯನಕ್ಕೆ ಗುರಿಪಡಿಸಬೇಕಾದರೆ ಒಂದಲ್ಲ ಒಂದು ರೀತಿಯ ವಿಭಾಗ ಕ್ರಮ ಅನಿವಾರ್ಯವಾಗುತ್ತದೆ. ಅದರೆ ಸ್ವಲ್ಪ ವೈಜ್ಞಾನಿಕವಾಗಿದ್ದಷ್ಟು ಅಧ್ಯಯನಕ್ಕೆ ಹೆಚ್ಚು

ಅನುಕೂಲವಾಗುತ್ತದೆ. ಹಾಗಾಗಿ ಬೇರೆ ಬೇರೆ ವಿದ್ವಾಂಸರಿಗಿಂತ ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ಕೈಗೊಂಡ ಮೇಲಿನ ವಿಭಾಗ ಕ್ರಮ ತುಂಬಾ ಸೂಕ್ತವಾಗಿದೆ. "ಮತ, ಧರ್ಮ, ಭಾಷೆ, ಸಾಹಿತ್ಯರೂಪ, ರಾಜವಂಶ ಈ ಮುಂತಾದ ಕೆಲವು ತತ್ವಗಳನ್ನು ಅನುಸರಿಸಿದರೆ ಒಟ್ಟಿನಲ್ಲಿ ಎಲ್ಲಕ್ಕೂ ಹೊಂದಿಕೊಳ್ಳುವಂತಿರಬೇಕು. ಆದರೆ ಶತವರ್ಷಗತ ಕನ್ನಡ ಸಾಹಿತ್ಯದ ಪ್ರವಾಹರೂಪಿಯಾದ ಇತಿಹಾಸವನ್ನು ಅನ್ಯೋನ್ಯತಮವಾಗಿ ನಿರೂಪಿಸುವ ಒಂದು ತರ್ಕ ಶುದ್ಧಮಾರ್ಗವೂ ಆಗಿರಬೇಕು. ಪೂರ್ವಾಪರ ಸಂಬಂಧಗಳೊಡನೆ, ಪ್ರವೃತ್ತಿಗಳೊಡನೆ ಕೂಡಿಕೊಂಡು ಮೌಲ್ಯಮಾಪನ ಮಾಡುವ ಸೌಕರ್ಯವಿರಬೇಕು. ಈ ಮುಂತಾದ ಕೆಲವಂಶಗಳು ಈ ವಿಭಾಗ ಕ್ರಮದ ಆಯ್ಕೆಗೆ ಕಾರಣವಾಗಿದೆ" ಎಂಬ ಅವರ ಮಾತುಗಳು ಸಾಹಿತ್ಯ ಚರಿತ್ರೆಯ ವಿಭಾಗ ಕ್ರಮಕ್ಕೆ ಸರಿಯಾದ ವ್ಯಾಖ್ಯಾನವಾಗುತ್ತದೆ.

## 1.6 ಕನ್ನಡ ಸಾಹಿತ್ಯದ ಪ್ರಾಚೀನತೆ

ಕನ್ನಡ ಸಂಸ್ಕೃತ ಜನ್ಯವಲ್ಲ ಅದು ಮೂಲ ದ್ರಾವಿಡದಿಂದ ಬಂದದ್ದು. ಇದು ಗೊತ್ತಾದದ್ದು ಆಧುನಿಕ ಭಾಷಾ ಶಾಸ್ತ್ರದ ವಿದ್ವಾಂಸರಿಂದ. ಇದು ಸ್ಪಷ್ಟವಾದ ನಂತರ ನಮ್ಮ ವಿದ್ವಾಂಸರು ಕನ್ನಡದ ಪ್ರಾಚೀನತೆ ಎಲ್ಲಿಗೆ ಹೋಗುತ್ತದೆ ಎಂದು ದೊರೆತ ಆಧಾರಗಳ ಸಾಮಾಗ್ರಿಯಿಂದ ವ್ಯಾಖ್ಯಾನಿಸಲು, ವಿಶ್ಲೇಷಿಸಲು ಶುರು ಮಾಡಿದರು.

ಕನ್ನಡದ ಮೊದಲ ರಾಷ್ಟ್ರಕವಿ ಎಂ. ಗೋವಿಂದ ಪೈ ಅವರು ಕ್ರಿ.ಪೂ. ಎರಡನೆ ಶತಮಾಕ್ಕೆ ಸೇರಿದ ಗ್ರೀಕ್ ಪ್ರಹಸನದಲ್ಲಿ ಕಂಡು ಬರುವ ಶಬ್ದಗಳು ಕನ್ನಡದ್ದೆಂದು ವಾದಿಸಿ ಆ ಕಾಲದಲ್ಲೆ ಕನ್ನಡ ಇತ್ತೆಂದು ವಾದಿಸುತ್ತಾರೆ. ಹಾಲರಾಜನ 'ಗಾಥಸಪ್ತಶತಿ'ಕೃತಿಯಲ್ಲಿ ಕೆಲವು ಕನ್ನಡದ ಪದಗಳಿವೆ. ಅದು ಕ್ರಿ.ಶ. ೧ನೆ ಶತಮಾನ. ನಂತರ ಟಾಲೆಮಿಯ ಬರಹದಲ್ಲಿ (ಕ್ರಿ.ಶ. ೧೫೦) ಅಶೋಕನ ಶಿಲಾಶಾಸನದಲ್ಲಿ (ಕ್ರಿ.ಶ. ೨ನೇ ಶತಮಾನ) ಶಿಲಪ್ಪದಿಗಾರಂ(ತಮಿಳು ಕಾವ್ಯ) ಕ್ರಿ.ಶ. ೨ನೇ ಶತಮಾನ, ಭಾರತದಲ್ಲಿ ಕರ್ನಾಟಕ ಪದದ ಉಲ್ಲೇಖಗಳನ್ನು ಗಮನದಲ್ಲಿಟ್ಟುಕೊಂಡು ವಿದ್ವಾಂಸರು ಕನ್ನಡದ ಪ್ರಾಚೀನತೆ ಬಗ್ಗೆ ಚರ್ಚೆಯನ್ನು ಆರಂಭಿಸುತ್ತಾರೆ. ಹಾಗಾಗಿ ಕನ್ನಡಕ್ಕೆ ಒಂದು ಪ್ರಾಚೀನ ಇತಿಹಾಸವಿರುವುದು ಸ್ಪಷ್ಟವಾಗುತ್ತದೆ.

## 1.7 ಪ್ರಾಚೀನ ಕನ್ನಡ ಕವಿಗಳು

ಕವಿರಾಜ ಮಾರ್ಗದಲ್ಲಿ ಒಂದು ಪದ್ಯ ಹೀಗಿದೆ:

ವಿಮೊಳೋದಯ ನಾಗಾರ್ಜುನ
ಸಮೇತ ಜಯ ಬಂಧು ದುರ್ವಿನೀತಾದಿಗಳೀ
ಕ್ರಮದೊಳ್ ನೆಗಟ್ಕೆ ಗದ್ಯಾ
ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್II

ವಿಮಳೋದಯ, ನಾಗಾರ್ಜುನ, ಜಯಬಂಧು, ನಿರ್ವಿನೀತ ಇವರುಗಳನ್ನು ಕವಿರಾಜಮಾರ್ಗದಲ್ಲಿ ಹೆಸರಿಸುತ್ತಾರೆ. ಇವರೆಲ್ಲ ಕನ್ನಡದಲ್ಲಿ ಸಾಕಷ್ಟು ಕೆಲಸ ಮಾಡಿದವರು. ಇವರ ಕೃತಿಗಳು ಉಪಲಬ್ಧವಿಲ್ಲ. ಜೊತೆಗೆ ಇನ್ನು ಕೆಲವರನ್ನು ಹೆಸರಿಸುತ್ತಾನೆ.

ಪರಮ ಶ್ರೀ ವಿಜಯ ಕವೀ
ಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ।
ನಿರತಿಶಯ ವಸ್ತು ವಿಸ್ತರ
ವಿರಚನೆ ಲಕ್ಷ್ಯಂತದಾದ್ಯ ಕಾವ್ಯಕ್ಕೆಂದುಂII

ಜೊತೆಗೆ ಕವಿರಾಜಮಾರ್ಗದಲ್ಲಿ ಉದಾಹರಿಸಿದ ರಾಮಾಯಣ, ಭಾರತದ ಪಂಕ್ತಿಗಳನ್ನು ಗಮನಿಸಿದರೆ 'ಕವಿರಾಜಮಾರ್ಗ' (ಕ್ರಿ.ಶ. ೮೫೦) ಬರುವುದಕ್ಕಿಂತ ಮುಂಚಿತವಾಗಿಯೇ ಕನ್ನಡದಲ್ಲಿ ಸಾಹಿತ್ಯ ಸೃಷ್ಟಿ ಆಗುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ.

ಕನ್ನಡಿಗರು ಹೆಮ್ಮೆಪಡಬಹುದಾದ 'ಹಲ್ಮಿಡಿ' ಶಾಸನ (ಕ್ರಿ.ಶ. ೪೫೦) ದೊರೆತದ್ದು ಕ್ರಿ.ಶ. ಐದನೇ ಶತಮಾನದಲ್ಲಿ. ಅದನ್ನು ಓದಿದರೆ ಅದರಲ್ಲಿ ಸುಮಾರು ೨೫ ಕನ್ನಡ ಪದಗಳಿವೆ. ಅನಂತರ ಸಿರಗುಂದದ ಶಾಸನ, ಮಂಗಳೇಶನ ಶಾಸನ, ಬಾದಾಮಿ ಶಾಸನಗಳ ಕಾಲಕ್ಕೆ ಕನ್ನಡ ಸಾಕಷ್ಟು ಬೆಳೆದಿರುವುದು ಗೊತ್ತಾಗುತ್ತದೆ.

ಸಾಧುಗೆ ಸಾಧು ಮಾಧುರ್ಯನ್ಗೆ ಮಾಧುರ್ಯಂ II
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್ II
ಮಾಧವನೀತನ್ ಪೆಱನಲ್ಲ II

ಮೇಲಿನ ಬಾದಾಮಿ ಶಾಸನದಲ್ಲಿ ಕನ್ನಡ ಹೇಗೆ ಬಳಕೆಯಾಗಿದೆ ಎಂಬುದರ ಜೊತೆಗೆ ಕನ್ನಡಿಗನ ಶೌರ್ಯ ಪರಾಕ್ರಮದ ವರ್ಣನೆಯೂ ಮೂಡಿ ಬಂದಿದೆ.

ಶ್ರವಣ ಬೆಳಗೊಳದ ನಿಷದಿಗಲ್ಲುಗಳಲ್ಲಿ ಕನ್ನಡ ಬಳಕೆಯಾದುದನ್ನು ಗಮನಿಸಿದರೆ (ಕ್ರಿ.ಶ. ೭೦೦) ಕನ್ನಡ ಐದನೆ ಶತಕದಿಂದ ನಿಧಾನವಾಗಿ ಸಾಹಿತ್ಯ ರಚನೆ ಮಾಡುವ ಹಂತಕ್ಕೆ ಬಲಿಯುತ್ತಿದ್ದುದು ಕಂಡು ಬರುತ್ತದೆ.

### 1.7.0 ನೃಪತುಂಗ

'ಕವಿರಾಜ ಮಾರ್ಗ' ನೃಪತುಂಗನ ಹೆಸರಲ್ಲಿದೆ. ರಾಷ್ಟ್ರಕೂಟ ಅಮೋಘವರ್ಷ ನೃಪತುಂಗನ

ಆಸ್ಥಾನದ ಕವಿಯಾದ ಶ್ರೀವಿಜಯ ಕವಿರಾಜಮಾರ್ಗವನ್ನು ರಚಿಸಿ ತನ್ನ ಆಶ್ರಯದಾತನ ಹೆಸರಲ್ಲಿ ಪ್ರಕಟಿಸಿದನೆಂದು ಆಧಾರ ಸಹಿತವಾದಿಸುತ್ತಾರೆ. ಶ್ರೀವಿಜಯ ಬಹುಶ್ರುತನು, ಕಾವ್ಯಕಲಾ ನಿಪುಣನೂ, ಅಲಂಕಾರ ಶಾಸ್ತ್ರಜ್ಞನೂ, ಉಭಯ ಭಾಷಾ ವಿಶಾರದನೂ ಆಗಿದ್ದನು. ರಾಷ್ಟ್ರಕೂಟ ಸಾಮ್ರಾಜ್ಯದ ಕೇಂದ್ರ ಬಿಂದುವಾಗಿದ್ದ ಮಾನ್ಯಖೇಟವೇ ಕವಿಯ ಜನ್ಮ ಸ್ಥಳ.

ಇದೊಂದು ಲಕ್ಷಣ ಗ್ರಂಥ. ಕಾವೇರಿಯಿಂದ ಗೋದಾವರಿವರೆಗೆ ಕನ್ನಡ ನಾಡು ವ್ಯಾಪಿಸಿತ್ತು ಎಂಬುದನ್ನು ಉಲ್ಲೇಖಿಸಿದ್ದಾನೆ.

ಕಾವೇರಿಯಿಂದ ಮಾಗೋ
ದಾವರಿವರ ಮಿರ್ದನಾಡದಾ ಕನ್ನಡದೊಳ್ I
ಭಾವಿಸಿದ ಜನಪದಂ ವಸು
ಧಾವಲಯ ವಿಲೀನ ವಿಶದ ವಿಷಯ ವಿಶೇಷಂ II

ಕನ್ನಡ ನಾಡಿನ ವ್ಯಾಪ್ತಿಯ ಬಗ್ಗೆ ನಮಗೆ ಸಿಗುವ ಮೊದಲ ಆಧಾರ ಗ್ರಂಥ. ಜೊತೆಗೆ ತಿರುಳ್ಗನ್ನಡ ಪ್ರಚಾರದಲ್ಲಿರುವ ಊರಿನ ಬಗ್ಗೆಯೂ ಇಲ್ಲಿ ಮಾಹಿತಿಯಿದೆ.

ಅದರೊಳಗಂ ಕಿಸುವೊೞಲಾ
ವಿದಿತ ಮಹಾಕೊಪಣ ನಗರದಾ ಪುಲಿಗೆಱೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್

ಕಿಸುವೊಳಲ್ (ಪಟ್ಟದಕಲ್ಲು) ಕೊಪಣ=(ಕೊಪ್ಪಳ) ಪುಲಿಗೆರೆ (ಲಕ್ಷ್ಮೇಶ್ವರ) ಒಕ್ಕುಂದ (ಒಕ್ಕುಂದ) ಇವುಗಳ ನಡುವೆ ಇರುವ ನಾಡೆ ತಿರುಳ್ಗನ್ನಡಸೀಮೆ. ಈ ಗ್ರಂಥದಲ್ಲಿ ಒಟ್ಟು ೫೩೬ ಪದ್ಯಗಳಿವೆ. ಮೂರು ಪರಿಚ್ಛೇದಗಳಿವೆ. ೧. ದೋಷಾದೋಷ ನಿರ್ಣಯ ೨. ಶಬ್ದಾಲಂಕಾರ ೩. ಅರ್ಥಾಲಂಕಾರ. ಈ ಬಗೆಯ ಶಾಸ್ತ್ರ ಗ್ರಂಥ ಬಂದಿರಬೇಕಾದರೆ ಅದಕ್ಕಿಂತ ಹಿಂದೆ ಸಾಹಿತ್ಯ ಗ್ರಂಥ ಬಂದಿರಲೇಬೇಕೆಂದು ತರ್ಕಿಸುತ್ತಾರೆ.

## 1.7.1 ಶಿವಕೋಟ್ಯಾಚಾರ್ಯ

ಕನ್ನಡದ ಮೊದಲ ಗದ್ಯ ಕೃತಿ 'ವಡ್ಡಾರಾಧನೆ'ಯನ್ನು ಬರೆದವನು ಶಿವಕೋಟ್ಯಾಚಾರ್ಯ. ಈ ಗ್ರಂಥದ ಕಾಲ ಕ್ರಿ.ಶ. ಸುಮಾರು ೯೨೦ ಎಂದು ಹೇಳುತ್ತಾರೆ. ಹರಿಷೇಣನ ಸಂಸ್ಕೃತದ ಬೃಹತ್ಕಥಾಕೋಶದಲ್ಲಿ ಬರುವ ಹತ್ತೊಂಬತ್ತು ಕಥೆಗಳು ಕನ್ನಡದಲ್ಲಿ ಕಾಣಿಸಿಕೊಂಡಿವೆ. ಆದರೆ ಉಪಕಥೆ, ವರ್ಣನೆ, ಅಂಕಿತನಾಮ, ಸ್ಥಳನಾಮಗಳ ವಿಷಯದಲ್ಲಿ ಅದಕ್ಕಿಂತ ಭಿನ್ನವಾಗಿದೆ. 'ಭಗವತಿ ಆರಾಧನಾ'ಎಂಬ ಗ್ರಂಥ ಇದಕ್ಕೆ ಮೂಲವಾಗಿರಬೇಕೆಂದೂ ಹೇಳುತ್ತಾರೆ. ಕನ್ನಡ ಗದ್ಯದ ಬೆಳವಣಿಗೆಯನ್ನು ಇದರಲ್ಲಿ ಕಾಣಬಹುದು.

## 1.7.2 ಪಂಪ

ಪಂಪ ಹುಟ್ಟಿದ್ದು ಕ್ರಿ.ಶ. ೯೦೨ರಲ್ಲಿ. ತಂದೆ ಭೀಮಪಯ್ಯ, ತಾಯಿ ಅಬ್ಬಣಬ್ಬೆ. ಭೀಮಪಯ್ಯ ವೈದಿಕ ಧರ್ಮವನ್ನು ಬಿಟ್ಟು ಜೈನಧರ್ಮವನ್ನು ಸ್ವೀಕರಿಸಿದ್ದ. ಜಿನವಲ್ಲಭ ಎಂಬ ಇನ್ನೊಬ್ಬ ಮಗನೂ ಈತನಿಗೆ ಇದ್ದಂತೆ ತಿಳಿದು ಬರುತ್ತದೆ. ಈತನ ಪೂರ್ವಜರು ಕನ್ನಡ ನಾಡಿನಿಂದ ವೆಂಗಿಪಳುವಿಗೆ ಹೋಗಿ ನೆಲೆಸಿರಬಹುದು. ಭೀಮಪಯ್ಯನ ಕಾಲದಲ್ಲಿ ಪುನಃ ಕನ್ನಡ ನಾಡಿಗೆ ಮರಳಿರಬಹುದು. ಪಂಪನ ತಾಯಿಯ ತವರು ಅಣ್ಣಿಗೇರಿ. ಬಾಲ್ಯವನ್ನು ಪಂಪ ಅಣ್ಣಿಗೇರಿಯಲ್ಲಿ ಕಳೆದಿರಬಹುದು. ವಿದ್ಯಾಭ್ಯಾಸ ಶ್ರವಣ ಬೆಳಗೊಳದಲ್ಲಿ ಆಗಿರಬೇಕು. ದೇವೇಂದ್ರಮುನಿ ಪಂಪನ ಗುರು. ವಿದ್ಯಾಭ್ಯಾಸದ ನಂತರ ವೇಮುಲವಾಡದ ಇಮ್ಮಡಿ ಅರಿಕೇಸರಿ ರಾಜನ ಆಸ್ಥಾನದ ಕವಿಯಿರಬೇಕು. ಅರಿಕೇಸರಿ ರಾಷ್ಟ್ರಕೂಟ ಚಕ್ರವರ್ತಿ ಮೂರನೇ ಇಂದ್ರನ ಮೊಮ್ಮಗನಾಗಿ ತನ್ನ ಬಾಲ್ಯವನ್ನು ಕನ್ನಡ ನಾಡಿನಲ್ಲೆ ಕಳೆದಿದ್ದಾನೆ. ಬಾಲ್ಯದಲ್ಲಿ ಇಬ್ಬರೂ ಒಡನಾಡಿಗಳಾಗಿದ್ದರೂ ಆಶ್ಚರ್ಯವಿಲ್ಲ.

ಪಂಪ ಕವಿ ಮಾತ್ರವಲ್ಲ, ಕಲಿಯೂ ಹೌದು. ಅರಿಕೇಸರಿಯ ಜೊತೆಯಲ್ಲಿ ಯುದ್ಧದಲ್ಲೂ ಭಾಗವಹಿಸುತ್ತಿದ್ದ. ಪಂಪ ಎರಡು ಕೃತಿಗಳನ್ನು ರಚಿಸಿದ್ದಾನೆ. ಒಂದು ಆದಿಪುರಾಣ, ಎರಡು ವಿಕ್ರಮಾರ್ಜುನವಿಜಯಂ. ಆದಿ ಪುರಾಣದ ಕೊನೆಯಲ್ಲಿ ಅದನ್ನು ಬರೆದು ಮುಗಿಸಿದ ಕಾಲವನ್ನು ಪಂಪನೇ ಹೇಳುತ್ತಾನೆ. ಅದು ಕ್ರಿ.ಶ. ೬೪೧. 'ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಂ'ಎಂದು ಆತನೇ ಹೇಳಿದ್ದರಿಂದ ಮೊದಲು ಆದಿ ಪುರಾಣವನ್ನು ಅನಂತರ ಪಂಪ ಭಾರತವನ್ನು ಬರೆದಿರಬೇಕು. ಒಂದನ್ನು ಮೂರು ತಿಂಗಳಲ್ಲೂ ಮತ್ತೊಂದನ್ನು ಆರು ತಿಂಗಳಲ್ಲೂ ಬರೆದು ಮುಗಿಸಿದ್ದಾಗಿ ಆತನೇ ಹೇಳಿದ್ದಾನೆ. ಕರೀಂ ನಗರದ ಶಾಸನದ ಆಧಾರದಿಂದ ಹೇಳುವುದಾದರೆ ಕ್ರಿ. ೯೪೬ ರ ಒಳಗೇ ಇದನ್ನು ಬರೆದು ಮುಗಿಸಿದ್ದಿರಬೇಕು.

'ಮುನ್ನಿನ ಕಬ್ಬಮನೆಲ್ಲಮಂ ಇಕ್ಕಿ ಮೆಟ್ಟಿದವು. ಸಮಸ್ತ ಭಾರತಮುಂ ಆದಿಪುರಾಣ ಮಹಾ ಪ್ರಬಂಧಮುಂ' ಎಂದು ಪಂಪನೇ ತನ್ನ ಕಾವ್ಯದಲ್ಲಿ ಹೇಳುತ್ತಾನೆ.

'ಪೂರ್ವ ಪುರಾಣ' ಸಂಸ್ಕೃತ ಗ್ರಂಥ. ಪಂಪನ ಆದಿಪುರಾಣಕ್ಕೆ ಇದೇ ಆಕರ. ವೇದ ವ್ಯಾಸರು ಬರೆದ ಮಹಾಭಾರತ ವಿಕ್ರಮಾರ್ಜುನ ವಿಜಯಂಗೆ ಆಕರ ಗ್ರಂಥ.

ಪಂಪ ತನ್ನ ಧರ್ಮಕ್ಕೆ ಸೇರಿದ ಕೃತಿಯನ್ನು ಆಗಮ ಗ್ರಂಥವೆಂದು, ವೈದಿಕ ಧರ್ಮಕ್ಕೆ ಸೇರಿದ ಕಾವ್ಯವನ್ನು ಲೌಕಿಕವೆಂದು ಕರೆಯುತ್ತಾನೆ.

ಜಿನಾಚಾರ್ಯರು ಬರೆದ ಪೂರ್ವ ಪುರಾಣವನ್ನು ಆಧರಿಸಿ ಬರೆದ ಆದಿ ಪುರಾಣ ಹದಿಮೂರು ಅಶ್ವಾಸಗಳುಳ್ಳ ಗ್ರಂಥ. ಆದಿ ತೀರ್ಥಂಕರನ ಕಥೆಯನ್ನು ಭವಾವಳಿಗಳನ್ನು ಇದರಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ. ಈತನ ಮಕ್ಕಳಾದ ಭರತ, ಬಾಹುಬಲಿಯರ ಜೀವನ ಚರಿತ್ರೆಯೂ ಇದರಲ್ಲಿ ಬಂದಿದೆ.

ವಜ್ರ ಜಂಘ ಶ್ರೀಮತಿಯ ಪ್ರಕರಣ, ಜನ್ಮಾಭಿಷೇಕ ವರ್ಣನೆ, ನೀಲಾಂಜನೇಯ ನೃತ್ಯ ಪ್ರಕರಣ, ಭರತ ಬಾಹುಬಲಿ ಪ್ರಸಂಗ ಮುಂತಾದ ಭಾಗಗಳು ಪಂಪನ ಕಾವ್ಯ ಶಕ್ತಿಯ ಪರಾಕಾಷ್ಠೆಯನ್ನು ಚಿತ್ರಿಸುವಂಥಾದ್ದು.

ವಿಕ್ರಮಾರ್ಜುನ ವಿಜಯ ಪಂಪನ ಎರಡನೆಯ ಕೃತಿ. ಸಂಸ್ಕೃತ ವ್ಯಾಸ ಭಾರತವನ್ನು ಸಮಗ್ರವಾಗಿ ಕನ್ನಡಕ್ಕೆ ತಂದ ಮೊದಲ ಕವಿ ಪಂಪ. ಕಾವ್ಯ ಕಥೆಯನ್ನು ಅಲ್ಲಲ್ಲಿ ಅಲ್ಪಸ್ವಲ್ಪ ಬದಲಾಯಿಸಿಕೊಂಡು ಕನ್ನಡಕ್ಕೆ ಒಂದು ಮಹಾಕಾವ್ಯವಾಗಿಸಿಕೊಟ್ಟಿದ್ದಾನೆ. ಅರಿಕೇಸರಿಯನ್ನು ಅರ್ಜುನನ ಜೊತೆ ಸಮೀಕರಿಸಿ ಕಾವ್ಯವನ್ನು ಬರೆದಿದ್ದಾನೆ. ತನ್ನ ಆಶ್ರಯದಾತನ ಬಗ್ಗೆ ಪಂಪನಿಗಿರುವ ಗೌರವ ಪ್ರೀತಿ ಇದರಿಂದಾಗಿ ಎದ್ದು ಕಾಣುತ್ತದೆ. ಕೃಷ್ಣ ಒಬ್ಬ ರಾಜತಾಂತ್ರಿಕನ ರೀತಿಯಲ್ಲಿ ಚಿತ್ರಿತವಾಗಿದ್ದಾನೆ. ದ್ರೌಪದಿ ಪಂಚವಲ್ಲಭೆಯಾಗಿದ್ದರೂ ಕಾವ್ಯದ ಕೊನೆಯಲ್ಲಿ ಅರ್ಜುನನಿಗೆ ಸುಭದ್ರೆಯೊಂದಿಗೆ ಪಟ್ಟಾಭಿಷೇಕವಾಗುತ್ತದೆ. ಕಾವ್ಯದ ಮಹಾನಾಯಕರನ್ನು ಒಂದೊಂದು ಮೌಲ್ಯಕ್ಕೆ ಒಬ್ಬೊಬ್ಬರನ್ನು ಪ್ರತಿನಿಧಿಯಾಗಿಸಿ ಕಾವ್ಯವನ್ನು ಆ ಧೋರಣೆಯಲ್ಲೇ ಮುಗಿಸಿದ್ದಾನೆ.

ಛಲದೊಳ್ ದುರ್ಯೋಧನಂ ನನ್ನಿಯೊಳಿನ ತನಯಂ ಗಂಡಿನೊಳ್ ಭೀಮಸೇನಂI
ಬಲದೊಳ್ ಮದ್ರೇಶನತ್ಯುನ್ನತಿಯೊಳಮರ ಸಿಂಧೂದ್ಭವಂಚಾಪವಿದ್ಯಾII
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್
ನಿರ್ಮಲಚಿತ್ತಂ ಧರ್ಮಪುತ್ರ ಮಿಗಿಲವರ್ಗಗಳಿನೀ ಭಾರತಂ ಲೋಕಪೂಜ್ಯಂII

II೧೪-೬೪II

'ಹಿತಮಿತ ಮೃದುವಚನಂ'ಎಂದು ತನ್ನನ್ನು ಕರೆದುಕೊಂಡದ್ದು ಸೂಕ್ತವಾಗಿಯೇ ಇದೆ. ಒಂದು ಲಕ್ಷ ಪದ್ಯದ ಕಾವ್ಯವನ್ನು ಕೇವಲ ೧೪ ಆಶ್ವಾಸನಗಳಲ್ಲಿ ಇಡುಕಿರಿಸಿ ಎಲ್ಲಿ ಹ್ರಸ್ವಮಾಡಬೇಕು, ಎಲ್ಲಿ ವಿವರಿಸಬೇಕು ಎಂಬ ಹಿಡಿತ ಪಂಪನಿಗೆ ಸಾಧಿಸಿದೆ.

ರಾಜಾಸ್ಥಾನದಲ್ಲಿದ್ದ ಪಂಪ ರಾಜಕಾರ್ಯವನ್ನು, ತಂತ್ರಗಾರಿಕೆಯನ್ನು ಬಹಳ ಸಮೀಪದಿಂದ ಬಲ್ಲ,ಕಾ ಅರಿಕೇಸರಿಯ ಸ್ನೇಹದ ಸವಿಯನ್ನು ಅಸ್ವಾದಿಸಿದವ. ಹಾಗಾಗಿ ದುರ್ಯೋಧನ ಮತ್ತು ಕರ್ಣರ ಸ್ನೇಹವನ್ನು ಬಹಳ ಸೊಗಸಾಗಿ ಚಿತ್ರಿಸಿದ್ದಾನೆ. ಅರ್ಜುನ ಕಥಾನಾಯಕನಾದರೂ ಕರ್ಣ ಸತ್ತಾಗ ಅವನಿಗೆ ಒಂದು ಚರಮಗೀತೆಯನ್ನು ಬರೆದ.

ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂI
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱುಕ II
ರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದುI
ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನ ಮಲ್ತೆ ಭಾರತಂII

II೧೨-೨೧೨II

ಪಾತ್ರ ಚಿತ್ರಣದಲ್ಲಿ, ಭಾಷಾ ಬಳಕೆಯಲ್ಲಿ, ಕಾವ್ಯ ಸಂವಿಧಾನ ರಚನೆಯಲ್ಲಿ ಪಾತ್ರಗಳನ್ನು ಮುಖಾಮುಖಿಯಾಗಿಸುವಲ್ಲಿ, ಹಂಗಿಲ್ಲದೆ ಮಾತಾಡುವುದರಲ್ಲಿ ಪಂಪನ ಪಾತ್ರಗಳು ಜೀವಂತವಾಗಿದ್ದುದರಿಂದಲೇ ಕವಿಕುಲ ಗುರು, ಆದಿ ಕವಿ ಎಂಬೆಲ್ಲ ಬಿರುದಿಗೆ ಪಾತ್ರವಾಗಿದ್ದಾನೆ.

### 1.7.3 ಪೊನ್ನ

ಪೊನ್ನ ಸ್ವಂತ ವಿಚಾರವನ್ನು ಹೇಳಿಕೊಂಡಿಲ್ಲ. ಪೊನ್ನ ಕವಿ ಭುವನೈಕ ರಾಮಾಭ್ಯುದಯವನ್ನು ರಚಿಸಿದುದು ರಾಷ್ಟ್ರಕೂಟರ ಮೂರನೇ ಕೃಷ್ಣನ ಆಶ್ರಯದಲ್ಲಿ. ಹಾಗಾಗಿ ಪೊನ್ನನ ಕಾಲವನ್ನು ನಿರ್ಣಯಿಸಲು ಇದು ಮುಖ್ಯ ಆಧಾರಗಳಾಗುತ್ತವೆ. ಪೊನ್ನ ಕ್ರಿ.ಶ. ೯೫೦ರಲ್ಲಿ ರಾಮಾಭ್ಯುದಯವನ್ನು ಕ್ರಿ.ಶ. ೯೨೩-೯೯೩ರ ಅವಧಿಯಲ್ಲಿ ಶಾಂತಿಪುರಾಣವನ್ನು ರಚಿಸಿರಬೇಕು. ಜಿನಾಕ್ಷರಮಾಲೆ ಎಂಬ ಇನ್ನೊಂದು ಗ್ರಂಥವನ್ನು ಬರೆದಿದ್ದಾನೆ.

ಭುವನೈಕ ರಾಮಾಭ್ಯುದಯ ಲೌಕಿಕ ಕಾವ್ಯ. ರಾಷ್ಟ್ರಕೂಟ ಮೂರನೇ ಕೃಷ್ಣನನ್ನು ಶ್ರೀರಾಮನೊಡನೆ ಅಭೇದಗೊಳಿಸಿ ಹೇಳಿದ್ದಾನೆ. ಪೊನ್ನನಿಗೆ ಕವಿ ಚಕ್ರವರ್ತಿ ಎಂಬ ಬಿರುದನ್ನು ಕೊಟ್ಟವನು ಮೂರನೆಯ ಕೃಷ್ಣನೆ. ಈ ಕೃತಿ ೧೪ ಅಶ್ವಾಸನೆಗಳುಳ್ಳದ್ದು. ಜಿನಾಕ್ಷರ ಮಾಲೆ ಒಂದು ಸ್ತೋತ್ರ ಗ್ರಂಥ, ಕಂದಪದ್ಯಗಳಿಂದ ಕೂಡಿವೆ. 22 ವ್ಯಂಜನಗಳಿಂದ ಪ್ರಾರಂಭವಾದ 22 ಗದ್ಯಪದ್ಯಗಳಿವೆ.

ಶಾಂತಿ ಪುರಾಣ ಒಂದು ಆಗಮ ಕಾವ್ಯ. ೧೬ನೆಯ ತೀರ್ಥಂಕರನನ್ನು ಕುರಿತು ರಚಿಸಿದ ಗ್ರಂಥ. ಶಾಂತಿಪುರಾಣಕ್ಕೆ ಗುಣಭದ್ರಾಚಾರ್ಯರ ಉತ್ತರ ಪುರಾಣದಲ್ಲಿರುವ ಶಾಂತಿ ತೀರ್ಥಂಕರ ಪುರಾಣ ಮತ್ತು ಅಸ ಗನ ಶಾಂತಿ ಪುರಾಣಗಳು ಆಕರ ಗ್ರಂಥವಾಗಿವೆ. ೧೨ ಅಶ್ವಾಸಗಳುಳ್ಳದ್ದು ಶಾಂತಿಪುರಾಣ.

ಭುವನೈಕ ರಾಮಾಭ್ಯುದಯ, ಗತ ಪ್ರತ್ಯಾಗತ, ಅಲಂಕಾರ, ಆದಿಪುರಾಣಮು, ವಿರಾಟಮು - ಇವೆಲ್ಲವು ಪೊನ್ನನ ಕೃತಿಗಳೇ, ಆದರೆ ದೊರಕಿಲ್ಲ.

### 1.7.4 ರನ್ನ

ರತ್ನತ್ರಯರಲ್ಲಿ ರನ್ನ ಮೂರನೆಯವನು. ಉಳಿದಿಬ್ಬರು ಪಂಪ, ಪೊನ್ನ, ಈ ಮಾತನ್ನು 'ಅಜಿತ ಪುರಾಣ'ದಲ್ಲಿ ರನ್ನನೇ ಹೇಳಿದ್ದಾನೆ "ಪಂಪನುಮಂ ಪೊನ್ನಿಗನುಂ ಕವಿರತ್ನನಂವೀಮೂವರ್"

ರನ್ನನ ತಂದೆ ಜಿನವಲ್ಲಭ. ತಾಯಿ ಅಬ್ಬಲಬ್ಬೆ. ಶಾಂತಿ ಮತ್ತು ಜಕ್ಕಿ ಎಂಬ ಇಬ್ಬರು ಹೆಂಡಿರು. ರಾಯ ಮತ್ತು ಅತ್ತಿಮಬ್ಬೆ ಮಕ್ಕಳುಗಳು. ಬಳೆಗಾರರ ಕುಟುಂಬದಲ್ಲಿ ಮುದುವೊಳಲಲ್ಲಿ ಹುಟ್ಟಿದ ರನ್ನ ಅಜಿತ ಸೇನಾಚಾರ್ಯರ ಶಿಷ್ಯನಾಗಿ ಚಾವುಂಡರಾಯನ ಪೋಷಣೆಯಲ್ಲಿ ವಿದ್ಯಾಭ್ಯಾಸವನ್ನು ಮಾಡಿದನು. ಚಾಲುಕ್ಯರಾಜರ ಆಶ್ರಯದಲ್ಲಿ ಚಕ್ರವರ್ತಿಯಾದ ಸತ್ಯಾಶ್ರಯ ಅಥವಾ ಇಱಿ ಬೆಡಂಗನ ಆಶ್ರಯದಲ್ಲಿದ್ದು ಅವನನ್ನೇ ಕಥಾನಾಯಕನನ್ನಾಗಿ ಮಾಡಿಕೊಂಡು 'ಸಾಹಸ ಭೀಮ ವಿಜಯಂ' ಅನ್ನು ಬರೆದನು.'ಅಜಿತನಾಥ ಪುರಾಣ'ವೆಂಬ ಆಗಮ ಕಾವ್ಯವನ್ನು ಕ್ರಿ.ಶ. ಸುಮಾರು ೯೮೨ರಲ್ಲಿ ರಚಿಸಿರಬಹುದೆಂದು ಊಹಿಸುತ್ತಾರೆ. ೨ನೆಯ ತೀರ್ಥಂಕರನಾದ ಅಜಿತಸ್ವಾಮಿ ಮತ್ತು ೨ನೆಯ ಚಕ್ರವರ್ತಿ ಸರ್ಗರನ ಚರಿತ್ರೆಯುಳ್ಳ ಜೈನಪುರಾಣ. ದಾನ ಚಿಂತಾಮಣಿ ಅತ್ತಿಮಬ್ಬೆ ಬರೆಸಿದಳೆಂದು ರನ್ನನೇ ಹೇಳುತ್ತಾನೆ. ಹಾಗಾಗಿ ಪೀಠಿಕಾ ಭಾಗದಲ್ಲಿ ಅವಳನ್ನು ಸ್ತುತಿಸುತ್ತಾನೆ. ೧೨ ಆಶ್ವಾಸಗಳುಳ್ಳ ಇದೊಂದು ಧಾರ್ಮಿಕ ಕೃತಿಯಾಗಿದೆಯೇ ಹೊರತು ಒಂದು ಕಾವ್ಯವಾಗಿ ಜೀವಸೆಲೆ ಆದಿ ಪುರಾಣದಂತೆ ಎದ್ದು ಕಾಣುವುದಿಲ್ಲ.

ರನ್ನನ ಮಹತ್ವದ ಎರಡನೇ ಕೃತಿ 'ಸಾಹಸ ಭೀಮ ವಿಜಯ'ಇದಕ್ಕೆ 'ಗದಾಯುದ್ಧ'ಎಂಬ ಇನ್ನೊಂದು ಹೆಸರೂ ಇದೆ. ಈ ಕಾವ್ಯವನ್ನು ಬಿ.ಎಂ.ಶ್ರೀಯವರು ನಾಟಕವಾಗಿ ಪರಿವರ್ತಿಸಿದ್ದಾರೆ. 'ಸಿಂಹಾವಲೋಕನ ಕ್ರಮ'ದಿಂದ ಮಹಾಭಾರತದ ಮುಖ್ಯ ಘಟನೆಗಳನ್ನು ಪಾಠಕರ ಗಮನಕ್ಕೆ ತರುತ್ತಾನೆ. ೧೦ ಆಶ್ವಾಸಗಳುಳ್ಳ ಈ ಕಾವ್ಯ ಪಂಪ ಭಾರತ, ಭಾಸನ ಊರುಭಂಗ, ಭಟ್ಟ ನಾರಾಯಣನ 'ವೇಣೀ ಸಂಹಾರ'ಗಳಿಂದ ಪ್ರಭಾವಿತವಾಗಿದೆ.

ಈ ಕೃತಿಯು ಕಥಾನಾಯಕ ಭೀಮ. ದುರ್ಯೋಧನರ ಗದಾಯುದ್ಧವೇ ಇದರ ಕೇಂದ್ರ ಬಿಂದು. ಆದರೆ ಈ ಕಾವ್ಯವನ್ನು ಅತ್ಯಂತ ನಾಟಕೀಯವಾಗಿ, ಜೀವಂತಗೊಳಿಸಿದ್ದನೆಂದರೆ ನಿಜಕ್ಕೂ ರನ್ನ ಕವಿಯ ಸಾಮರ್ಥ್ಯ ಕನ್ನಡ ಓದುಗರನ್ನು ವಿಮರ್ಶಕರನ್ನು ತನ್ನತ್ತ ಸೆಳೆದುಕೊಂಡ ಮಹಾಕವಿಯಾಗಿ ಉಳಿದಿದ್ದಾನೆ.

### 1.7.5 ಚಾವುಂಡರಾಯ

ಇವನು 'ಚಾವುಂಡರಾಯ ಪುರಾಣ'ವೆಂಬ ಗದ್ಯಗ್ರಂಥವನ್ನು ರಚಿಸಿದವನು. ಸ್ವತಃ ವೀರನೂ ಆಗಿದ್ದನು. ಆದಿಪುರಾಣಕ್ಕಿಂತ ೩೫ ವರ್ಷಗಳ ತರುವಾಯ ಇದು ರಚನೆಯಾಗಿರಬೇಕೆಂದು ಊಹಿಸುತ್ತಾರೆ. ಆದಿಪುರಾಣದ ವಿಷಯವು 'ಚಾವುಂಡರಾಯ ಪುರಾಣ'ದ ಪ್ರಥಮ ಭಾಗದ ವಿಷಯವೂ ಒಂದೆ. ಮೂಲ ಆಕರವೂ ಒಂದೆ. ಆದರೆ ಇಬ್ಬರ ಕಾವ್ಯ ರೀತಿ ಮಾತ್ರ ಬೇರೆ ಬೇರೆ. ತ್ರಿಷಷ್ಠಿ ಲಕ್ಷಣ ಮಹಾಪುರಾಣ ಎಂದು ಇವನ ಗ್ರಂಥದ ಹೆಸರು. ೬೩ ಶಲಾಕ ಪುರುಷರ ಚರಿತೆ ಇದರ ವಿಷಯ.

---

## 1.8 ಸ್ವಪರೀಕ್ಷಾ ಪ್ರಶ್ನೆಗಳು

---

1. ಸಾಹಿತ್ಯದ ಎರಡು ಶಾಖೆಗಳು ಯಾವುವು?

2. ಸಾಹಿತ್ಯ ಚರಿತ್ರೆ ಹೇಗಿರುತ್ತದೆ?

3. ಕವಿ ಚರಿತ್ರೆ ಹೇಗಿರುತ್ತದೆ?

4. ಸಾಹಿತ್ಯ ಚರಿತ್ರೆಯ ವಿಭಾಗಕ್ರಮವನ್ನು ತಿಳಿಸಿ.

5. ಕನ್ನಡದ ಪ್ರಾಚೀನತೆ ಎಲ್ಲಿಂದ ಆರಂಭವಾಯಿತು?

.......................................................................................................

.......................................................................................................

.......................................................................................................

6. ವಡ್ಡಾರಾಧನೆ ಬರೆದವರು ಯಾರು?

.......................................................................................................

.......................................................................................................

.......................................................................................................

7. ಪಂಪನ ಕಾಲ ಯಾವುದು?

.......................................................................................................

.......................................................................................................

.......................................................................................................

8. ಪಂಪನ ಕೃತಿಯನ್ನು ಹೆಸರಿಸಿ.

.......................................................................................................

.......................................................................................................

.......................................................................................................

9. ಪೊನ್ನನ ಕಾಲ ಯಾವುದು

.......................................................................................................

.......................................................................................................

.......................................................................................................

10. ಪೊನ್ನನ ಕೃತಿಯನ್ನು ಹೆಸರಿಸಿ

.......................................................................................................

.......................................................................................................

.......................................................................................................

11. ರನ್ನನ ಕಾಲ ಯಾವುದು?

..........................................................................................

..........................................................................................

..........................................................................................

12. ಕನ್ನನ ಕೃತಿಯನ್ನು ಹೆಸರಿಸಿ.

..........................................................................................

..........................................................................................

..........................................................................................

13. ಚಾಮುಂಡರಾಯ ಪುರಾಣದ ಕರ್ತೃಯಾರು?

..........................................................................................

..........................................................................................

..........................................................................................

## 1.9 ಸಾರಾಂಶ

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಧ್ಯಯನ ಮಾಡುವುದರಿಂದ ಕನ್ನಡ ಸಾಹಿತ್ಯದ ಪ್ರಾಚೀನತೆ ಮತ್ತು ಶ್ರೇಷ್ಠತೆಗಳೆರಡೂ ತಿಳಿದು ಬರುತ್ತದೆ.

ಪ್ರಾಚೀನ ಕೃತಿಗಳು ದೊರಕದಿದ್ದರೂ ನೃಪತುಂಗನ ನಂತರದ ಕಾವ್ಯಗಳಿಂದ ವಡ್ಡಾರಾಧನೆ ಹಾಗು ಪಂಪ, ರನ್ನ, ಜನ್ನಾದಿಗಳ ಕೃತಿಗಳು ಸಿಗುವುದರಿಂದ ಕನ್ನಡ ಸಾಹಿತ್ಯದ ವೈಭವವನ್ನು ಗುರುತಿಸುವ ದೃಷ್ಟಿಯಿಂದ ಸಾಹಿತ್ಯ ಚರಿತ್ರೆಯ ಅಧ್ಯಯನ ಮಹತ್ವದ ಕೆಲಸವಾಗುತ್ತದೆ.

ಕನ್ನಡದ ಸಂಸ್ಕೃತಿ, ಭಾಷೆ, ಛಂದಸ್ಸು ಇವುಗಳ ಅಧ್ಯಯನದ ದೃಷ್ಟಿಯಿಂದ ಕೂಡ ಕನ್ನಡ ಸಾಹಿತ್ಯ ಚರಿತ್ರೆ ಲಾಭದಾಯಕವಾದುದು.

# ಸಂಚಿಕೆ - 4
# ಕನ್ನಡ ಸಾಹಿತ್ಯ ಚರಿತ್ರೆ - ಹಳಗನ್ನಡ ಸಾಹಿತ್ಯ

## ಘಟಕ - 2
## ಹಳಗನ್ನಡ ಕವಿ ಕೃತಿಗಳು : ಒಂದನೆಯ ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ರುದ್ರಭಟ್ಟ, ಜನ್ನ ಮತ್ತು ಆಂಡಯ್ಯ

ಪರಿವಿಡಿ :

## 2.0 ಉದ್ದೇಶ

- ಮತ್ತಷ್ಟು ಹಳಗನ್ನಡ ಕವಿ ಕಾವ್ಯಗಳನ್ನು ಅಧ್ಯಯನ ಮಾಡುವುದು.
- ಜೈನಕವಿಗಳ ಕಾವ್ಯಗಳ ಸಮಾನ ಮಾದರಿಗಳ ಬಗ್ಗೆ ಅವಲೋಕಿಸುವುದು.
- ಜೈನ ಪುರಾಣ, ರಾಮಾಯಣಗಳಿಗು, ವೈದಿಕ ಪುರಾಣ, ರಾಮಾಯಣಗಳಿಗಿರುವ ವ್ಯತ್ಯಾಸಗಳನ್ನು ಗ್ರಹಿಸುವುದು.
- ಚಂಪೂಯುಗದ ಕವಿಗಳ ಬಗ್ಗೆ ತಿಳಿದುಕೊಳ್ಳುವುದು.

## 2.1 ಪೀಠಿಕೆ

ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡುವುದೆಂದರೆ ಅತ್ಯಂತ ಸಂತೋಷದ ಕಾಯಕ. ಕಾರಣ ಕವಿಗಳು ತಮ್ಮ ಕಾವ್ಯದಲ್ಲಿ ನಿರೂಪಿಸುವ ಮೌಲ್ಯಗಳು, ಜೀವನದ ಬಗ್ಗೆ ಇರುವ ಕಾಳಜಿಗಳು ಸರಿತಪ್ಪುಗಳ ವಸ್ತು ಚಿತ್ರಣಗಳಿಂದಾಗಿ ಮಹತ್ವದ ವಿಷಯಗಳು ಅನಾವರಣಗೊಳ್ಳುತ್ತಾ ಹೋಗುತ್ತವೆ. ಶಾಸ್ತ್ರ ಗ್ರಂಥಗಳು (ಛಂದೋಂಬುಧಿ), ಕಾವ್ಯಗ್ರಂಥಗಳು (ಪಂಪರಾಮಾಯಣ, ಯಶೋಧರ ಚರಿತೆ) ಕನ್ನಡದ ಆಲೋಚನಾ ವಿಧಾನವನ್ನು, ವಿಭಿನ್ನ ಬದುಕಿನ ವಿಧಾನಗಳನ್ನು ಕಾವ್ಯಗಳಲ್ಲಿ ಚಿತ್ರಿಸುವ ಮೂಲಕ ಕನ್ನಡ ಸಾಹಿತ್ಯವನ್ನು ಕನ್ನಡಕವಿಗಳು ಶ್ರೀಮಂತಗೊಳಿಸುತ್ತ ಹೋದರು.

## 2.2 ಒಂದನೆಯ ನಾಗವರ್ಮ : ಕಾಲ, ದೇಶ, ಕೃತಿ ವಿಚಾರ

### 2.2.1 ಕಾಲ

ಒಂದನೆಯ ನಾಗವರ್ಮನು ೧೦ನೇ ಶತಮಾನದ ಕಡೆಯಲ್ಲಿ ಮತ್ತು ೧೧ನೆಯ ಶತಮಾನದ ಮೊದಲಲ್ಲಿ ಕೃತಿಗಳನ್ನು ರಚಿಸಿರುವುದು ಅನ್ಯ ಆಧಾರಗಳಿಂದ ತಿಳಿದು ಬರುತ್ತದೆ. ಕವಿಯು ತನ್ನ ಕೃತಿಗಳಲ್ಲಿ ತಾನು ಹುಟ್ಟಿದ ಕಾಲವನ್ನಾಗಲೀ, ಕೃತಿ ಮುಕ್ತಾಯದ ಕಾಲವನ್ನಾಗಲೀ ತಿಳಿಸಿಲ್ಲ. ಈ ಕವಿಯು ಕಲ್ಯಾಣ ಚಾಲುಕ್ಯ ಅರಸು 5ನೆಯ ವಿಕ್ರಮಾದಿತ್ಯನ ಸಾಮಂತನಾದ ಚಂದ್ರ ಎಂಬ ರಾಜನ ಆಶ್ರಯದಲ್ಲಿದ್ದನು. ಈ ಚಂದ್ರನ ಕಾಲ ಸು. ೧೦೯೯-೧೪. ನಾಗವರ್ಮನು ಮಾಳವಾಧೀಶನಾದ ಭೋಜರಾಜನಿಂದ ಸನ್ಮಾನಿಸಲ್ಪಟ್ಟನು. ಭೋಜನ ಕಾಲ ಸು : ೧೦೧೦-೧೦೫೦. ಈ ಆಧಾರದ ಮೇಲೆ ಒಂದನೆಯ ನಾಗವರ್ಮನು ೯೯೯ ರಲ್ಲಿ ಬದುಕಿದ್ದನೆಂದು ತಿಳಿಯಲಾಗಿದೆ.

### 2.2.2 ದೇಶ

ನಾಗವರ್ಮನ ಕಾಲವನ್ನು ಪ್ರಯಾಸದಿಂದ ನಿರ್ಧರಿಸುವಂತೆಯೇ ದೇಶ ವಿಚಾರವನ್ನೂ ಸ್ಪಷ್ಟಪಡಿಸಿಕೊಳ್ಳುವುದು ಕ್ಲಿಷ್ಟವಾಗಿದೆ. ಕವಿಯು ಚಂದ್ರರಾಜನನ್ನು ಸ್ತುತಿಸಿರುವುದರಿಂದ, ಈ ರಾಜನಿಗೆ ಸೇರಿದ ಬನವಾಸಿ ಪ್ರಾಂತದಲ್ಲಿ ಕವಿಯು ಇದ್ದನೆಂದು ತಿಳಿಯಬಹುದು. ಅವನಿಗೆ ಕವಿರಾಜ ಹಂಸ ಎಂಬ ಬಿರುದೂ ಇದ್ದಿತು ಕವಿಯು ವೈದಿಕ ಮತವನ್ನು ಅನುಸರಿಸುತ್ತಿದ್ದನೆಂದು ಹೇಳಬಹುದು.

### 2.2.3 ಕೃತಿಗಳು

ನಾಗವರ್ಮರು ಒಬ್ಬನೇ ಇಬ್ಬರೇ ಎಂಬ ವಾದವಿವಾದಗಳಿರುವಂತೆಯೇ ಕೃತಿಗಳ ಬಗ್ಗೆಯೂ ಭಿನ್ನಾಭಿಪ್ರಾಯಗಳು ಇವೆ. ಅನೇಕ ಸಂಶೋಧಕರು ಈ ವಿಷಯದಲ್ಲಿ ಚರ್ಚೆ ನಡೆಸಿ ಕಡೆಗೆ ಒಂದು ತೀರ್ಮಾನಕ್ಕೆ ಬಂದಿದ್ದಾರೆ. ಒಂದನೆಯ ನಾಗವರ್ಮನು ರಚಿಸಿರುವ ಕೃತಿಗಳು ಎರಡು 1. ಛಂದೋಂಬುಧಿ 2.ಕರ್ನಾಟಕ ಕಾದಂಬರಿ. ಛಂದೋಂಬುಧಿಯು ಒಂದು ಶಾಸ್ತ್ರ ಗ್ರಂಥ, ಛಂದಸ್ಸಿನ ವಿಷಯವನ್ನು

ತಿಳಿಸುತ್ತದೆ. ಕರ್ಣಾಟಕ ಕಾದಂಬರಿಯು ಸಂಸ್ಕೃತ ಕವಿಯಾದ ಬಾಣನ 'ಕಾದಂಬರಿ'ಯ ಅನುವಾದವಾಗಿದೆ. ಆದರೆ ಶಬ್ದಕ್ಕೆ ಶಬ್ದ ಎಂಬ ರೀತಿಯಲ್ಲಿ ಅಲ್ಲ.

**ಕೃತಿ ಪರಿಚಯ : ಛಂದೋಂಬುಧಿ**

ಇದು ಒಂದು ಜನಪ್ರಿಯ ಛಂದೋಗ್ರಂಥ, ಕಾವ್ಯದಲ್ಲಿ ಛಂದಸ್ಸು ಇರುತ್ತದಲ್ಲವೆ. ಅದನ್ನು ಕುರಿತು ಬರೆದ ಗ್ರಂಥವನ್ನು ಛಂದೋಗ್ರಂಥ ಎನ್ನುತ್ತಾರೆ. ಇದರಲ್ಲಿ ಒಟ್ಟು ೬ ಪ್ರಕರಣಗಳಿವೆ. ಅವುಗಳನ್ನು ಅಧಿಕಾರಗಳು ಎಂಗು ಕರೆದಿದ್ದಾನೆ. ಒಂದೊಂದು ಅಧಿಕಾರಕ್ಕೂ ಒಂದೊಂದು ಹೆಸರನ್ನು ಕೊಟ್ಟಿದ್ದಾನೆ. ಅವುಗಳೆಂದರೆ ಸಂಜ್ಞಾ ಪ್ರಕರಣ, ಸಮವೃತ್ತ ಪ್ರಕರಣ, ಮಾಲಾವೃತ್ತಾರ್ಧಸಮವಿಷಮಾದಿ ವೃತ್ತ ಪ್ರಕರಣ, ಕಂದಾದಿ ಮಾತ್ರಾ ವೃತ್ತ ಪ್ರಕರಣ, ಕರ್ಣಾಟಕ ವಿಷಯ ಜಾತಿವೃತ್ತ ಪ್ರಕರಣ, ಷಟ್‌ಪ್ರತ್ಯಯ ವಿವರಣ ಪ್ರಕರಣ.

ಇಲ್ಲಿ ಹೇಳಲಾದ ಆರು ಅಧಿಕಾರಗಳಲ್ಲಿ ನಾಗವರ್ಮನು ಸಂಸ್ಕೃತ, ಪ್ರಾಕೃತ, ಕನ್ನಡ ಛಂದಸ್ಸುಗಳನ್ನು ವಿವರಿಸಿದ್ದಾನೆ. ಪ್ರಾರಂಭದಲ್ಲಿ ಛಂದಸ್ಸು ಬೆಳೆದು ಬಂದ ವಿಧಾನವನ್ನು ಹೇಳಿದ್ದಾನೆ. ಮೊದಲು ಈಶ್ವರನು ಬ್ರಹ್ಮನಿಗೆ ಹೇಳಿದನು. ಬ್ರಹ್ಮನಿಂದ ಇಂದ್ರನಿಗೆ, ಇಂದ್ರನಿಂದ ಬೃಹಸ್ಪತಿಗೆ ಬೃಹಸ್ಪತಿಯಿಂದ ಮಾಂಡವ್ಯನಿಗೆ ಮಾಂಡವ್ಯನಿಂದ ಪಿಂಗಳನಿಗೆ ಬಂದಿತು. ಪಿಂಗಳನಿಂದ ಅದು ಲೋಕದಲ್ಲಿ ಪ್ರಸಾರವಾಯಿತು. ಅದನ್ನು ನಾಗವರ್ಮನು ತನ್ನ ಪತ್ನಿಗೆ ಹೇಳಿದ ಹಾಗೆ ಗ್ರಂಥ ರಚನೆಯು ನಡೆದಿದೆ. ನಾಗವರ್ಮನು ಪಿಂಗಲ, ಜಯದೇವ ಮುಂತಾದವರನ್ನು ಅನುಸರಿಸಿದ್ದಾನೆ. ಇಲ್ಲಿ ಇರುವ ಆರು ಅಧಿಕಾರಗಳಲ್ಲಿ ಐದನೆಯದು ಸಂಪೂರ್ಣವಾಗಿ ಕನ್ನಡ ಛಂದಸ್ಸಿಗೆ ಮೀಸಲಾಗಿದೆ. ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಛಂದೋಂಬುಧಿಯೇ ತಳಹದಿ. 'ಕರ್ಣಾಟಕ ವಿಷಯ ಜಾತಿ ವೃತ್ತ'ಗಳ ವಿವರಣೆಯನ್ನು ಮಾಡಿದ್ದಾನೆ. ಇದರಲ್ಲಿ ತ್ರಿಪದಿ, ಪರಿಯಕ್ಕರ, ಷಟ್ಪದಿ ಇತ್ಯಾದಿ ಸೇರಿವೆ. ಇವುಗಳ ವೈಶಿಷ್ಟ್ಯವೆಂದರೆ ಇವೆಲ್ಲವೂ ಅಂಶ ವೃತ್ತಗಳು, ೨, ೩, ೪ ಅಂಶಗಳನ್ನು ಪರಿಗಣಿಸಿ ಬ್ರಹ್ಮ, ವಿಷ್ಣು, ರುದ್ರಗಣಗಳನ್ನು ಬಳಸಿಕೊಂಡು ವೃತ್ತಗಳನ್ನು ರಚಿಸಲಾಗುತ್ತದೆ.

ಮೊದಲನೆಯ ಅಧಿಕಾರದಲ್ಲಿ ಸಂಸ್ಕೃತದ ವರ್ಣಗಣಗಳ ಬಗ್ಗೆ ವಿವರಿಸಲಾಗಿದೆ. ಎರಡನೆಯದರಲ್ಲಿ ನಾಲ್ಕು ಸಾಲುಗಳೂ ಸಮವಾಗಿರುವ ವರ್ಣವೃತ್ತ (ಪದ್ಯ)ಗಳ ಲಕ್ಷಣಗಳನ್ನು ವಿವರಿಸಲಾಗಿದೆ. ಮೂರನೆಯದರಲ್ಲಿ ಅರ್ಧಸಮ ವೃತ್ತಗಳ, ಸಮವಲ್ಲದ ಸಾಲುಗಳ ವೃತ್ತಗಳ, ರಗಳೆ ದಂಡಕ ಮುಂತಾದುವುಗಳ ವಿವರಣೆಯಿದೆ. ನಾಲ್ಕನೆಯದರಲ್ಲಿ ಕಂದ ಪದ್ಯ, ಆರ್ಯೆ, ಗೀತಿಕೆ ಮುಂತಾದುವುಗಳ ವಿಚಾರವಿದೆ. ಆರನೆಯದಲ್ಲಿ ಛಂದಸ್ಸಿಗೆ ಸಂಬಂಧಿಸಿದ ಗಣಿತ ವಿಷಯವನ್ನು ತಿಳಿಸಿಲಾಗಿದೆ.

ಇದು ಒಂದು ಶಾಸ್ತ್ರಗ್ರಂಥವಾದುದರಿಂದ ಭಾಷೆಯು ತುಂಬಾ ಮುಖ್ಯವಾಗುವುದಿಲ್ಲ. ಭಾಷೆಯ ವಿಲಾಸವು ಕಾವ್ಯ, ನಾಟಕ ಇತ್ಯಾದಿ ಕಲ್ಪನಾತ್ಮಕ ಕೃತಿಗಳಲ್ಲಿ ಕಂಡುಬರುವಂತೆ ಶಾಸ್ತ್ರ ಗ್ರಂಥಗಳಲ್ಲಿ ಕಂಡು ಬರುವುದಿಲ್ಲ. ಇಲ್ಲಿ ವಿಷಯವೇ ಮುಖ್ಯ : ವೇಷವಲ್ಲ. ಕಂದ ಪದ್ಯಗಳೇ ಹೆಚ್ಚಾಗಿರುವುದರಿಂದ ಕನ್ನಡ ಶಬ್ದಗಳೇ ಹೆಚ್ಚಾಗಿರುವ ಸರಳವಾದ ಹಳಗನ್ನಡವನ್ನು ಬಳಸಲಾಗಿದೆ.

**ಕೃತಿ ಪರಿಚಯ : 'ಕರ್ಣಾಟಕ ಕಾದಂಬರಿ'**

**ಕಥಾವಸ್ತು**

ಕಾದಂಬರಿಯ ಕಥಾವಸ್ತುವು ಒಂದು ಪ್ರಣಯ ಕಥೆ. ಭೂಲೋಕ ಮತ್ತು ದೇವಲೋಕಗಳ ನೆಲೆಯಲ್ಲಿ ಈ ಕಥೆಯು ನಡೆಯುತ್ತದೆ. ರಾಮಾಯಣ ಮಹಾಭಾರತ, ಭಾಗವತ ಇತ್ಯಾದಿಗಳಿಂದ ಕಥಾವಸ್ತುವನ್ನು ತೆಗೆದುಕೊಳ್ಳುವುದು ಸಾಮಾನ್ಯ ಸಂಗತಿ, ಆದರೆ ಕಾದಂಬರಿಯ ಕಥೆಯು ಕಲ್ಪಿತವಾದುದು. ಅದು ಸಾಮಾನ್ಯ ಪ್ರಣಯ ಕಥೆಯಲ್ಲ: ಉದಾತ್ತವಾದ ಪ್ರೇಮದ ಕಥೆ. ಇದರಲ್ಲಿ

ದೇವತೆಗಳು, ಗಂಧರ್ವಾದಿ ಮನುಷ್ಯರು, ಪ್ರಾಣಿಗಳು ಎಲ್ಲರೂ ಬರುತ್ತಾರೆ. ಕಥೆಯು ನಮ್ಮ ಕುತೂಹಲವನ್ನು ಹೆಚ್ಚಿಸುತ್ತಾ ಸಾಗುತ್ತದೆ.

ಈ ಕಾವ್ಯದ ಕಥೆಯು ತುಂಬಾ ಸಂಕೀರ್ಣವಾದುದು. ಸುತ್ತಿ ಬಳಸಿ ಸಾಗುವುದೇ ಅಲ್ಲದೇ ಒಳಗೆ ಕಥೆಗಳೂ ಸೇರಿಕೊಳ್ಳುತ್ತವೆ. ಆದ್ದರಿಂದ ಕಥೆಯನ್ನು ಅನುಸರಿಸಿಕೊಡು ಹೋಗಲು ತುಂಬಾ ತಾಳ್ಮೆ ಬೇಕು. ಆದರೆ ಯಾವ ಭಾಗದಲ್ಲೂ ಅದು ನೀರಸವಾಗಿಲ್ಲ. ಕಥೆಯೊಳಗೆ ಕಥೆ ಬರುವುದರಿಂದ ತಡೆದು ಗ್ರಹಿಸಿ ಮುಂದೆ ಹೋಗಬೇಕಾಗುತ್ತದೆ. ಅನ್ಯಮನಸ್ಕರಾಗಿ ಓದುವುದು ಸಾಧ್ಯವಿಲ್ಲ. ಸಂಬಂಧಗಳು ತಿಳಿಯದೆ ಹಿಂದಕ್ಕೆ ಹೋಗಿ ಅಲ್ಲಿಂದ ಮತ್ತೆ ಮುಂದುವರಿಯಬೇಕಾಗುತ್ತದೆ. ಕಥೆಯನ್ನು ಸರಳವಾಗಿ ಹೀಗೆ ಹೇಳಬಹುದು.

ಮಹಾಶ್ವೇತೆ ಗಂಧರ್ವರಾಜಕುಮಾರಿ. ಪುಂಡರೀಕ, ಕಪಿಂಜಲ ಇಬ್ಬರೂ ಋಷಿಕುಮಾರರು. ಪುಂಡರೀಕನನ್ನು ನೋಡಿದ ಮಹಾಶ್ವೇತೆಯು ಅವನಲ್ಲಿ ಮೋಹಗೊಂಡಳು. ಪುಂಡರೀಕನೂ ಸಹ ಅತಿಯಾಗಿ ಮೋಹಗೊಂಡು ಬೆಳುದಿಂಗಳಿಂದ ಇನ್ನಷ್ಟು ಪೀಡಿತನಾಗಿ ಪ್ರಾಣವನ್ನೇ ಕಳೆದುಕೊಂಡನು, ಅವನು ಸಾಯುವ ಮೊದಲು ಚಂದ್ರನಿಗೆ ಶಾಪ ಕೊಡುತ್ತಾನೆ. ಚಂದ್ರನೂ ಪುಂಡರೀಕನಿಗೆ ಶಾ- ಕೊಡುತ್ತಾನೆ ಮತ್ತು ಅವನ ಶರೀರವನ್ನು ತೆಗೆದುಕೊಂಡು ಹೋಗಿ ಕಡದಂತೆ ಇಡುತ್ತಾನೆ. ಪುಂಡರೀಕನ ಶರೀರವನ್ನು ಹಿಂಬಾಲಿಸಿದ ಕಪಿಂಜಲನಿಗೆ ಸಮಾಧಾನ ಹೇಳಿ ಚಂದ್ರನು ಕಳುಹಿಸುತ್ತಾನೆ. ಅವನು ಆತುರದಿಂದ ಋಷಿಯೊಬ್ಬನನ್ನು ದಾಟಿದ ಪ್ರಯುಕ್ತ ಅವನು ಇಂದ್ರಾಯುಧ ಎಂಬ ಹೆಸರಿನ ಕುದುರೆಯಾಗುತ್ತಾನೆ.

ಚಂದ್ರನು ಯುವರಾಜ ಚಂದ್ರಾಪೀಡನಾಗಿಯೂ ಪುಂಡರೀಕನು ಮಂತ್ರಿಯ ಮಗ ವೈಶಂಪಾಯನನಾಗಿಯೂ ಹುಟ್ಟುತ್ತಾರೆ. ಇಂದ್ರಾಯುಧ ಚಂದ್ರಾಪೀಡನ ವಾಹನವಾಗುತ್ತದೆ. ಚಂದ್ರನ ಹೆಂಡತಿ ರೋಹಿಣಿಯು ಭೂಮಿಯಲ್ಲಿ ಹುಟ್ಟಿ ಚಂದ್ರಾಪೀಡನ ಆತ್ಮೀಯ ಸಹಾಯಕಿಯಾಗುತ್ತಾಳೆ (ಪತ್ರಲೇಖೆ)

ಚಂದ್ರಾಪೀಡನು ವೈಶಂಪಾಯನ, ಪತ್ರಲೇಖೆ ಇವರೊಡನೆ ಮತ್ತು ಸೈನ್ಯದೊಡನೆ ದಿಗ್ವಿಜಯ ಯಾತ್ರೆಯನ್ನು ಕೈಗೊಳ್ಳುತ್ತಾನೆ. ಚಂದ್ರಾಪೀಡನು ಕಿನ್ನರರನ್ನು ಹಿಂಬಾಲಿಸಿಕೊಂಡು ಒಬ್ಬನೇ ಬಹುದೂರ ಹೋಗುತ್ತಾನೆ. ಅಲ್ಲಿ ಒಂದು ಕಡೆ ಮಹಾಶ್ವೇತೆಯು ತಪಸ್ಸು ಮಾಡುತ್ತಿರುತ್ತಾಳೆ. ಚಂದ್ರಾಪೀಡನು ಅವಳ ವಿಚಾರವನ್ನು ತಿಳಿದು ತುಂಬಾ ನೊಂದುಕೊಳ್ಳುತ್ತಾನೆ. ಮಹಾಶ್ವೇತೆಯು ತನ್ನ ಗೆಳತಿ ಕಾದಂಬರಿಯು ಕನ್ಯಾವ್ರತವನ್ನು ಸ್ವೀಕರಿಸಿರುವುದನ್ನು ತಿಳಿದು ಅವಳಿಗೆ ಬುದ್ಧಿವಾತುಗಳನ್ನು ಹೇಳಲು ಚಂದ್ರಾಪೀಡನೊಡನೆ ಹೋಗುತ್ತಾಳೆ. ಚಂದ್ರಾಪೀಡ ಮತ್ತು ಕಾದಂಬರಿ ಪರಸ್ಪರ ಪ್ರೇಮದಿಂದ ಮನಸೋಲುತ್ತಾರೆ. ರಾಜನ ಆದೇಶದಂತೆ ಶೀಘ್ರವಾಗಿ ರಾಜಧಾನಿಗೆ ಚಂದ್ರಾಪೀಡನು ಹೋಗಬೇಕಾಗುತ್ತದೆ. ಅವನು ಪತ್ರಲೇಖೆಯನ್ನು ಕಾದಂಬರಿಯ ಬಳಿ ಬಿಟ್ಟು, ಒಬ್ಬನೇ ಪ್ರಯಾಣ ಮಾಡುತ್ತಾನೆ.

ಚಂದ್ರಾಪೀಡನ ಜೊತೆಯಲ್ಲಿ ಬಂದಿದ್ದ ಮಂತ್ರೀಸುತ ವೈಶಂಪಾಯನನ್ನು ಅಲ್ಲಿಯೇ ಉಳಿಸಿಕೊಂಡು ಸೈನ್ಯವನ್ನು ಕಳುಹಿಸಿಬಿಡುತ್ತಾನೆ. ಅವನು ತುಂಬಾ ನಿರಾಶನಾಗಿ, ಮಂಕುಬಡಿದಂತೆ ಇದ್ದನೆಂದು ತಿಳಿದು ಚಂದ್ರಾಪೀಡನು ಶೀಘ್ರವಾಗಿ ಮರು ಪ್ರಯಾಣವನ್ನು ಕೈಗೊಳ್ಳುತ್ತಾನೆ. ಆದರೆ ವೈಶಂಪಾಯನನು ಅಲ್ಲೆಲ್ಲೂ ಕಾಣಿಸುವುದಿಲ್ಲ. ಮಹಾಶ್ವೇತೆಯನ್ನು ಕೇಳಿದಾಗ ಅವಳು ದುಃಖದಿಂದ ನಡೆದದ್ದನ್ನು ತಿಳಿಸುತ್ತಾಳೆ -'ಅಪರಿಚಿತನ ಕಾಮವಿಕಾರದ'ಮಾತುಗಳನ್ನು ಕೇಳಿ ಅವನನ್ನು ಗಿಳಿಯಾಗುವಂತೆ ಶಾಪವನ್ನು ಕೊಟ್ಟೆ ಎಂದು ಗೋಳಾಡುತ್ತಾಳೆ. ಅಷ್ಟರಲ್ಲಿ ಕಾದಂಬರಿ, ಪತ್ರಲೇಖೆಯರು ಅಲ್ಲಿಗೆ ಬರುತ್ತಾರೆ. ಆದರೆ ಅವರು ಬರುವಷ್ಟರಲ್ಲಿ ಚಂದ್ರಾಪೀಡನು ಮೂರ್ಛೆಹೋದಂತಿರುತ್ತಾನೆ. ಕಾದಂಬರಿಯು ಆತ್ಮಹತ್ಯೆ ಮಾಡಿಕೊಳ್ಳಲು ಸಿದ್ಧಳಾದಾಗ ಅಶರೀರ ವಾಣಿಯು ಕೇಳಿಸುತ್ತದೆ. ಚಂದ್ರಾಪೀಡನು ಮತ್ತೆ ಬದುಕುವನೆಂದೂ, ಶರೀರವನ್ನು ಎಚ್ಚರಿಕೆಯಿಂದ ಕಾಪಾದಬೇಕೆಂದೂ ಅದು ತಿಳಿಸುತ್ತದೆ.

ಪತ್ರಲೇಖೆಯು ಇಂದ್ರಾಯುಧದೊಡನೆ ಸರೋವರಕ್ಕೆ ನೆಗೆಯುತ್ತಾಳೆ. ಸರೋವರದಿಂದ ಕಪಿಂಜಲ ಎದ್ದು ಬರುತ್ತಾನೆ. ಹಿಂದೆ ನಡೆದ ಸಂಗತಿಯನ್ನು ತಿಳಿಸುತ್ತಾನೆ. ಅನಂತರ ಕಪಿಂಜಲನು ಗಿಳಿಯನ್ನು (ಪುಂಡರೀಕ) ನೋಡಲು ಅಲ್ಲಿಂದ ಹೊರಟುಹೋಗುತ್ತಾನೆ.

ಪುಂಡರೀಕನ ತಾಯಿಯು ಚಂಡಾಲ ಕನ್ಯೆಯ ರೂಪವನ್ನು ಧರಿಸಿ ಗಿಳಿಯನ್ನು ಹುಡುಕಿ ಹಿಡಿದುಕೊಂಡು (ಅವನ ತಂದೆ) ಶ್ವೇತುಕೇತುವು ಯಜ್ಞವನ್ನು ಮುಗಿಸುವವರೆಗೆ ಗಿಳಿಯನ್ನು ರಕ್ಷಿಸಲು ತೊಡಗುತ್ತಾಳೆ. ಗಿಳಿಯನ್ನು ತಂದು ಶೂದ್ರಕ ಮಹಾರಾಜನಿಗೆ ಕೊಡುತ್ತಾಳೆ. ಗಿಳಿಯು ರಾಜನಿಗೆ ಆಶೀರ್ವಾದ ಮಾಡುತ್ತದೆ. ಎಲ್ಲರಿಗೂ ಆಶ್ಚರ್ಯವಾಗುತ್ತದೆ. ಚಂಡಾಲ ಕನ್ನಿಕೆಯು ಗಿಳಿಯ ಪೂರ್ವೋತ್ತರಗಳನ್ನು ತಿಳಿಸುತ್ತಾಳೆ. ಶೂದ್ರಕನೇ ಚಂದ್ರಾಪೀಡನಾಗಿದ್ದವನೆಂದು ಹೇಳುತ್ತಾನೆ, ಅದನ್ನು ಕೇಳಿದ ಗಿಳಿ ಮತ್ತು ಶೂದ್ರಕ ಇಬ್ಬರೂ ಸಂಕಲ್ಪದಿಂದಲೇ ದೇಹತ್ಯಾಗ ಮಾಡುತ್ತಾರೆ.

ಶೂದ್ರಕನು ದೇಹವನ್ನು ಬಿಟ್ಟಕೂಡಲೇ ಚಂದ್ರಾಪೀಡನ ದೇಹ ಸಜೀವವಾಗುತ್ತದೆ. ಆಕಾಶದಿಂದ ಪುಂಡರೀಕನು ಇಳಿದು ಬರುತ್ತಾನೆ. ಚಂದ್ರಾಪೀಡ ಕಾದಂಬರಿಯರು; ಪುಂಡರೀಕ ಮಹಾಶ್ವೇತೆಯರ ವಿವಾಹಗಳು ನೆರವೇರುತ್ತವೆ. ಎಲ್ಲವೂ ಮಂಗಳಮಯವಾಗುತ್ತದೆ. ಇದು ಸ್ಥೂಲವಾದ ಪಕ್ಷಿನೋಟ

ಕವಿರಾಜಮಾರ್ಗದಲ್ಲಿ ಸಂಸ್ಕೃತ ಮತ್ತು ಕನ್ನಡ ಶಬ್ದಗಳನ್ನು ಹದವರಿತು ಬೆರಸುವಂತೆ ಹೇಳಲಾಗಿದೆ. ಪಂಪ ಮತ್ತು ಇತರರು ಈ ಮಾತನ್ನು ಮರೆಯದೆ ಅನುಸರಿಸಿದ್ದಾರೆ. ಸಂಸ್ಕೃತ ಶಬ್ದಗಳು ಹೆಚ್ಚಾಗಿದ್ದರೆ ಮಾರ್ಗಕಾವ್ಯ ಎಂದೂ, ಕನ್ನಡ ಶಬ್ದಗಳು ಹೆಚ್ಚಾಗಿದ್ದರೆ ದೇಸೀಕಾವ್ಯ ಎಂದೂ ಭಾವಿಸಿರುವಂತೆ ಕಾಣುತ್ತದೆ. ನಾಗವರ್ಮನು ಗದ್ಯ ಮತ್ತು ವೃತ್ತಗಳಲ್ಲಿ ಸಂಸ್ಕೃತ ಶಬ್ದಗಳನ್ನು ಹೆಚ್ಚು ಬಳಸುತ್ತಾನೆ. ಕಂದ ಪದ್ಯಗಳಲ್ಲಿ ಕನ್ನಡ ಶಬ್ದಗಳೇ ಹೆಚ್ಚು. ವೃತ್ತಗಳಲ್ಲಿಯೂ ಕನ್ನಡ ಶಬ್ದಗಳೇ ಪ್ರಧಾನವಾಗಿರುವುದೂ ಕಂಡುಬರುತ್ತದೆ. ಬಾಣನ ಪ್ರಭಾವದಿಂದ ಸಂಸ್ಕೃತ ಸಮಾಸಗಳನ್ನು ರಚಿಸುವ ಅಪೇಕ್ಷೆ ಉಂಟಾಗಿರುವುದಕ್ಕೆ ನಿದರ್ಶನಗಳೂ ಇವೆ.

### 2.2.4 ಕೃತಿ ವಿಮರ್ಶೆ

ಅ) ಛಂದೋಂಬುಧಿ ಒಂದು ಉತ್ತಮವಾದ ಛಂದೋಗ್ರಂಥವಾಗಿದೆ. ಅಚ್ಚಕನ್ನಡ ಛಂದಸ್ಸುಗಳನ್ನು ತಿಳಿಯಲು ಇದರ ಸಹಾಯವು ಅನಿವಾರ್ಯವಾಗಿದೆ. ನಾಗವರ್ಮನ ವಿಶ್ಲೇಷಣೆಗೆ ಬೇರೆ ಮೂಲ ಸಾಮಗ್ರಿಯು ಸಿಗುತ್ತದೆಯೇ ಇಲ್ಲವೇ ಎನ್ನುವುದು ತಿಳಿದು ಬರುವುದಿಲ್ಲ.

ಆ) ಸಂಸ್ಕೃತ ಭಾಷೆಯಲ್ಲಿರುವ ಬಾಣನ ಕಾದಂಬರಿಯು ಗದ್ಯರೂಪದಲ್ಲಿದೆ. ಆದರೆ ಅದು ಪದ್ಯದ ಲಯ, ಛಂದಸ್ಸು ಇವುಗಳನ್ನು ಒಳಗೊಂಡಿದೆ. ನಾಗವರ್ಮನು ಅದನ್ನು ಪದ್ಯರೂಪಕ್ಕೆ ತಿರುಗಿಸಿ ಚಂಪೂ ಕಾವ್ಯವನ್ನಾಗಿ ಮಾಡಿದ್ದಾನೆ. ಪದ್ಯರೂಪವು ಯಾವಾಗಲೂ ತೀವ್ರ ಪರಿಣಾಮಕಾರಿಯಾದುದು. ಭಾವದ ತೀವ್ರತೆಯು ಇದ್ದಾಗ ಮಾತು ಪದ್ಯರೂಪಕ್ಕೆ ತಿರುಗುತ್ತದೆ, ಅಂದರೆ ಕಾವ್ಯದ ಲಕ್ಷಣವನ್ನು ಪಡೆದುಕೊಳ್ಳುತ್ತದೆ. ಕಥಾಭಾಗ ಮತ್ತು ರಸಭಾವಗಳು ತುಂಬಾ ಚೆನ್ನಾಗಿ ಗೋಚರಿಸುತ್ತವೆ. ಕನ್ನಡದ ಕಾದಂಬರಿ ಕಾವ್ಯವು ಕೇವಲ ಅನುವಾದವಾಗಿದ್ದರೆ ಇಷ್ಟು ಸ್ವಾರಸ್ಯವು ಇರುತ್ತಿರಲಿಲ್ಲ. ಕಾವ್ಯದ ತಿರುಳನ್ನು ತೆಗೆದುಕೊಂಡು ಪದ್ಯರೂಪದಲ್ಲಿ ಬರೆದಿರುವುದರಿಂದ ಮೂಲ ಕಾವ್ಯಕ್ಕಿಂತಲೂ ಕೆಲವು ಕಡೆ ಹೆಚ್ಚು ಆಕರ್ಷಕವಾಗಿ ಬಂದಿದೆ.

ನಾಗವರ್ಮನು ಕೇವಲ ಅನುವಾದಕನಲ್ಲ. ಅವನು ಸಹಜವಾಗಿಯೇ ಕವಿಯ ಮನೋಧರ್ಮವನ್ನು ಹೊಂದಿದ್ದನು. ಮೂಲ ಕಾವ್ಯದ ಜಟಿಲತೆಯನ್ನು ಕಡಿಮೆ ಮಾಡಿ ತಿಳಿಗೊಳಿಸಲು ಯತ್ನಿಸಿದ್ದಾನೆ. ಹಾಗೆಂದ ಮಾತ್ರಕ್ಕೆ ಬಾಣನನ್ನು ಮೀರಿಸಿದ್ದಾನೆ ಎಂದು ಹೇಳಲಾಗುವುದಿಲ್ಲ. ಬಾಣನ ಕೆಲವು ವರ್ಣನೆಗಳನ್ನು ಬದಲಾಯಿಸಿಕೊಂಡು ಕೊಂಚ ಅನೌಚಿತ್ಯಕ್ಕೆ ಕಾರಣನಾಗಿರುವುದೂ ಉಂಟು. ಹತ್ತನೇ ಶತಮಾನದ ಕವಿಗಳು ವೀರ ಕಾವ್ಯಗಳನ್ನು ಬರೆದಂತೆ ನಾಗವರ್ಮನು ಬರೆಯದೆ ಶೃಂಗಾರ

ರಸವು ಪ್ರಧಾನವಾದ ಅದರಲ್ಲಿಯೂ ವಿಪ್ರಲಂಭ (ವಿಯೋಗ) ಶೃಂಗಾರವೇ ಪೂರ್ಣವಾಗಿ ವ್ಯಾಪಿಸಿರುವ ಕಾವ್ಯವನ್ನು ರಚಿಸಿ ಹೊಸ ಮಾರ್ಗವನ್ನು ನಿರ್ಮಿಸಿದ್ದಾನೆ.

## 2.3 ನಾಗಚಂದ್ರ : ಕಾಲ ದೇಶ ಕೃತಿ ವಿಚಾರ

### 2.3.1 ಕಾಲ

ಈ ಕವಿಯು ಇತರ ಹಲವು ಕವಿಗಳು ಹೇಗೆ ತಮ್ಮ ಕಾಲವನ್ನು ಸೂಚಿಸಿದ್ದಾರೋ ಹಾಗೆ ಏನನ್ನೂ ಹೇಳಿಕೊಂಡಿಲ್ಲ. ತನ್ನ ಕೃತಿಗಳನ್ನು ಬರೆದು ಮುಗಿಸಿದ ಕಾಲವನ್ನೂ ತಿಳಿಸಿಲ್ಲ. ಇಂತಹ ಕವಿಗಳ ಬಗ್ಗೆ ಸಂಶೋಧಕರು ಅನ್ಯ ಆಧಾರಗಳನ್ನು ಇಟ್ಟುಕೊಂಡು ಕಾಲವನ್ನು ಕಂಡು ಹಿಡಿಯಲು ಯತ್ನಿಸುತ್ತಾರೆ. ಹಲವು ಬಗೆಯ ವಾದಗಳನ್ನು ಮಂಡಿಸುತ್ತಾರೆ. ಅವುಗಳ ಪ್ರಕಾರ ನಾಗಚಂದ್ರನ ಕಾಲವು ಕ್ರಿ.ಶ. ೧೦೪೦ ರಿಂದ ೧೧೪೦ ರ ನಡುವಣ ಅವಧಿ ಎಂದು ತಿಳಿಯಲಾಗಿದೆ. ಸಂಶೋಧಕರ ಒಂದೆರಡು ವಾದಗಳನ್ನು ಇಲ್ಲಿ ತಂದರೆ ಅವರು ಹೇಗೆ ತರ್ಕಿಸುತ್ತಾರೆ ಎಂಬುದು ನಿಮಗೆ ತಿಳಿಯುತ್ತದೆ. ಡಾ. ನರಸಿಂಹಾಚಾರ್ಯರು ಹೀಗೆ ಹೇಳುತ್ತಾರೆ. "ನಾಗಚಂದ್ರನ ರಾಮಾಯಣದಲ್ಲಿ ಮೇಘಚಂದ್ರ ಎಂಬಾತನನ್ನು ಹೊಗಳಿ ಬರೆದಿರುವ ಪದ್ಯವಿದೆ. ಅದೇ ಪದ್ಯವು ಶ್ರವಣ ಬೆಳುಗೊಳದ ೧೨೭ನೇ ನಂಬರಿನ ಶಾಸನದಲ್ಲೂ ಇದೆ. ಆ ಶಾಸನದ ಕಾಲ ಕ್ರಿ.ಶ. ೧೧೧೫ ಅಂದ ಮೇಲೆ ನಾಗಚಂದ್ರನು ೧೧೧೫ಕ್ಕಿಂತ ಮೊದಲೇ ರಾಮಾಯಣವನ್ನು ಬರೆದಿರಬೇಕು", ಇನ್ನೊಂದು ಉದಾಹರಣೆಯನ್ನು ನೋಡಿ ಬಿ.ಎಲ್. ರೈಸ್‌ರವರ ವಾದ ಹೀಗಿದೆ. 'ನಾಗಚಂದ್ರನು ತನ್ನ ರಾಮಾಯಣದಲ್ಲಿ ವಾಸುಪೂಜ್ಯಮುನಿಯನ್ನೂ, ತ್ರೈವಿದ್ಯಶ್ರುತ ಕೀರ್ತಿ ಮುನಿಯನ್ನೂ ನೆನೆದಿರುವುದರಿಂದ ರಾಮಾಯಣವು ೧೦೮೦-೧೧೦೦ರ ಸುಮಾರಿನಲ್ಲಿ ರಚಿತವಾಗಿರಬೇಕು" ಎಂ. ಗೋವಿಂದ ಪೈಗಳು ಹೀಗೆ ಹೇಳುತ್ತಾರೆ - "ನಾಗಚಂದ್ರನು ತನ್ನ 'ಮಲ್ಲಿನಾಥ ಪುರಾಣ'ದಲ್ಲಿ ಕಾವ್ಯದ ನಾಯಕ ವೈಶ್ರವಣನನ್ನು ಚಾಲುಕ್ಯ ವಿಕ್ರಮಾದಿತ್ಯನೊಡನೆ ಹೋಲಿಸಿದ್ದಾನೆ. ವೈಶ್ರವಣನ ಮಗನಾದ ಶ್ರೀಧರನನ್ನು ವಿಕ್ರಮಾದಿತ್ಯನ ಮಗ ಮೂರನೆಯ ಸೋಮೇಶ್ವರನೊಡನೆ ಹೋಲಿಸಿದ್ದಾನೆ. ವಿಕ್ರಮಾದಿತ್ಯನ ಕಾಲ (೧೦೭೬- ೧೧೨೬). ಸೋಮೇಶ್ವರನ ಕಾಲ (೧೧೨೬-೧೧೩೮). ಆದ್ದರಿಂದ ನಾಗಚಂದ್ರನ ಕಾಲವನ್ನು ಕ್ರಿ.ಶ. ೧೧೪೦ ಎಂದು ಹೇಳಬಹುದು" - ಹೀಗೆ ಹಲವು ವಾದಗಳಿರುವುದನ್ನು ನೋಡಬಹುದು.

### 2.3.2 ದೇಶ

ನಾಗಚಂದ್ರನ ಸ್ಥಳ ಯಾವುದು ಎಂಬುದು ಕೂಡ ಸರಿಯಾಗಿ ತಿಳಿದಿಲ್ಲ. ಈ ವಿಚಾರವಾಗಿಯೂ ಸಂಶೋಧಕರು ಬೇರೆ ಆಧಾರಗಳನ್ನು ಹುಡುಕಿ ನಿರ್ಧರಿಸಿದ್ದಾರೆ. ನಾಗಚಂದ್ರನು ಬರೆದಿರುವ ಶಾಸನವು ಬಿಜಾಪುರದಲ್ಲಿ ಸಿಕ್ಕಿದೆ. ಹಿಂದೆ ಆ ಊರನ್ನು ವಿಜಯಪುರ ಎನ್ನುತ್ತಿದ್ದರು. ನಾಗಚಂದ್ರನ ಮೊಮ್ಮಗ ಎಂದು ಹೇಳಲಾಗುವ ಬ್ರಹ್ಮಶಿವ ಕವಿಯೂ, ಅವನ ಮಿತ್ರನಾದ ಅಗ್ಗಳ ಕವಿಯೂ ಬಿಜಾಪುರಕ್ಕೆ ಸಮೀಪದಲ್ಲಿರುವ ಪೊಟ್ಟಲಕೆರೆ ಮತ್ತು ಇಂಗಳೇಶ್ವರದಲ್ಲಿದ್ದರು. ಈ ಕಾರಣದಿಂದಲೂ ನಾಗಚಂದ್ರನು ವಿಜಾಪುರ ಪ್ರದೇಶದಲ್ಲಿದ್ದನೆಂದು ಹೇಳಬಹುದು. ಈ ಕವಿಯು ಪ್ರಾರಂಭದಲ್ಲಿ ವಿಷ್ಣುವರ್ಧನನ ದ್ವಾರಸಮುದ್ರ (ಹಳೆ ಬೀಡು)ದಲ್ಲಿ ಕೆಲವು ಕಾಲ ಇದ್ದು ಅನಂತರ ವಿಜಾಪುರಕ್ಕೆ ಹಿಂದಿರುಗಿರಬೇಕೆಂದೂ ಭಾವಿಸಲಾಗಿದೆ. ಈ ಕವಿಯು ಯಾವ ರಾಜನ ಆಸ್ಥಾನದಲ್ಲಿದ್ದನೆಂಬುದು ಖಚಿತವಾಗಿ ತಿಳಿದು ಬರುವುದಿಲ್ಲ. ಬಹುಶಃ ಕವಿಯು ಯಾವ ರಾಜನ ಆಶ್ರಯದಲ್ಲಿಯೂ ಇದ್ದಂತೆ ಕಾಣುವುದಿಲ್ಲ.

### 2.3.3 ಕೃತಿಗಳು

ನಾಗಚಂದ್ರನು 'ಮಲ್ಲಿನಾಥ ಪುರಾಣ' ಮತ್ತು 'ರಾಮಚಂದ್ರ ಚರಿತ ಪುರಾಣ' ಎಂಬ ಎರಡು ಕಾವ್ಯಗಳನ್ನು ಬರೆದಿರುವುದು ಸ್ಪಷ್ಟವಾಗಿ ತಿಳಿದಿದೆ. ಆತನ ಹೆಸರಿನಲ್ಲಿ ಇನ್ನೂ ಕೆಲವು ಕೃತಿಗಳವೆ ಎಂಬುದನ್ನು ಸಂಶೋಧಕರು ತಿಳಿಸಿದ್ದಾರೆ. ಅವುಗಳು ಹೀಗಿವೆ - 'ಜಿನಮುನಿ ತನಯ', 'ಜಿನಾಕ್ಷರ

ಮಾಲೆ', 'ಕಾಮನ ಕಾಳಗ', 'ಯೋಗಾಮೃತ'. ಇವುಗಳಲ್ಲಿ 'ಜಿನಾಕ್ಷರ ಮಾಲೆಯು' ದೊರೆತಿಲ್ಲ. ಕಾಮನ ಕಾಳಗ ಎಂಬುದು ಷಟ್ಪದಿಯಲ್ಲಿದೆ. ಉಳಿದ ಕೃತಿಗಳು ಕಂದಪದ್ಯ ರೂಪದಲ್ಲಿವೆ.

## ಕೃತಿ ಪರಿಚಯ : 'ಮಲ್ಲಿನಾಥ ಪುರಾಣ'

### ಆಕರ

ಮಲ್ಲಿನಾಥ ಎಂಬುದು ೧೯ನೇ ತೀರ್ಥಂಕರನ ಹೆಸರು ಈ ತೀರ್ಥಂಕರನನ್ನು ಕುರಿತು ರಚಿತವಾದ ಕಾವ್ಯವೇ ಮಲ್ಲಿನಾಥಪುರಾಣ. ಈ ಕಾವ್ಯಕ್ಕೆ ಗುಣಭದ್ರಾಚಾರ್ಯರ ಉತ್ತರ ಪುರಾಣವೇ ಆಕರ ಗ್ರಂಥವಾಗಿದೆ. ಉತ್ತರ ಪುರಾಣದಲ್ಲಿ ಈ ಕಥೆಯು ೧೨೫ ಶ್ಲೋಕಗಳು ಮಾತ್ರ. ಇದರಲ್ಲಿ ಬಲದೇವ, ವಾಸುದೇವ, ಪ್ರತಿವಾಸುದೇವ ಇವರ ಕಥೆಗಳೂ ಮಲ್ಲಿನಾಥನ ಕಥೆಯೊಡನೆ ಸೇರಿಕೊಂಡಿವೆ.

### ಕಥಾವಸ್ತು

ಈ ಕಾವ್ಯದ ಕಥಾವಸ್ತುವೆಂದರೆ ಮಲ್ಲಿನಾಥನ ಜೀವನ ಚರಿತ್ರೆ. ತೀರ್ಥಕರನಾಗಲಿರುವ ವ್ಯಕ್ತಿಯ ಜೀವನವು ಎಲ್ಲರ ಜೀವನದಂತೆ ಇರುವುದಿಲ್ಲ. ಅವರು ಕಾರಣಪುರುಷರು. ಒಂದು ಮಹಾ ಉದ್ದೇಶ ಸಾಧನೆಗಾಗಿ ಭೂಮಿಗೆ ಬರುತ್ತಾರೆ. ಆ ಉದ್ದೇಶ ಮುಖ್ಯವೇ ವಿನಾ ಉಳಿದ ಯಾವುದೂ ಅವರಿಗೆ ಮುಖ್ಯವಲ್ಲ. ಅಂತಹ ಮಹಾ ಚೇತನದ ಜೀವನವನ್ನು ಕುರಿತು ಭಕ್ತಿ, ಗೌರವಗಳಿಂದ ಕಾವ್ಯರಚನೆ ಮಾಡುವುದು ಕಂಡುಬರುತ್ತದೆ. ಇದರ ಕಥಾಭಾಗವನ್ನು ಈಗ ನೋಡೋಣ. ಜಂಬೂದ್ವೀಪದ ಪೂರ್ವವಿದೇಶಕ್ಕೆ ಸೇರಿದ ಕಚ್ಛಕಾವತಿ ದೇಶದಲ್ಲಿ ವೀತಶೋಕಪುರ ಎಂಬ ನಗರವಿತ್ತು. ಅದರ ರಾಜನೇ ವೈಶ್ರವಣ. ಈತನೆ ಮುಂದೆ ಎರಡು ಜನ್ಮಗಳ ನಂತರ ತೀರ್ಥಂಕರನಾಗಲಿರುವ ಆಸನ್ನ ಭವ್ಯ ಜೀವ. ಆಸನ್ನ ಭವ್ಯ ಜೀವ ಎಂದರೆ ಮೋಕ್ಷಕ್ಕೆ ತುಂಬಾ ಹತ್ತಿರವಾದ ಜೀವ ಎಂದು ಅರ್ಥ. ಒಮ್ಮೆ ವೈಶ್ರವಣ ತನ್ನ ಸೈನ್ಯವನ್ನು ನೋಡಿ ಹಿಂದಿರುಗುವಾಗ, ದೊಡ್ಡದೊಂದು ಆಲದ ಮರಕ್ಕೆ ಸಿಡಿಲು ಬಡಿದು ಮರವು ಬೆಟ್ಟದಂತೆ ನೆಲಕ್ಕೆ ಒರಗಿತ್ತು. ಎಂಥ ದೊಡ್ಡ ಮರ ! ಈ ಕಡೆಯಿಂದ ಹೋಗುವಾಗ ಹೇಗಿತ್ತು. ಈಗ ಹೇಗಾಯಿತು ! ಎಂದು ವೈಶ್ರವಣ ಚಿಂತಿಸಿ, ವೈರಾಗ್ಯವನ್ನು ತಂದುಕೊಂಡು ತಪಸ್ಸಿಗೆ ತೆರಳಿದ, ಅವನು ಕಡೆಗೆ ಸಮಾಧಿ ಮರಣವನ್ನು ಹೊಂದಿ ಸ್ವರ್ಗದಲ್ಲಿ ಅಹಮಿಂದ್ರನಾಗಿ ಹುಟ್ಟಿದನು. ಅವನು ತನ್ನ ಆಯುಷ್ಯ ಪರ್ಯಂತ ಸುಖಭೋಗಗಳಲ್ಲಿ ಕಾಲವನ್ನು ಕಳೆದು ಮತ್ತೆ ಭೂಮಿಯಲ್ಲಿ ಹುಟ್ಟಿದ, ಆತನ ತಂದೆ ತಾಯಿಗಳು ಮಹಾರಾಜ ಕುಂಭ ಮತ್ತು ಪ್ರಭಾವತಿ. ಹೀಗೆ ಹುಟ್ಟಿದವನೇ ಮಲ್ಲಿನಾಥ. ಕಾಲಕ್ರಮದಲ್ಲಿ ಶಿಶುವು ಬಾಲಕನಾಗಿ, ಕುಮಾರನಾಗಿ, ತರುಣನೂ ಆದ. ಹೆತ್ತವರಿಗೆ ಸಂಭ್ರಮ. ಮಗನಿಗೆ ಮದುವೆ ಮಾಡಬೇಕೆಂಬ ಆಸೆ. ಆದರೆ ಮಲ್ಲಿನಾಥ ಅವರ ಆಸೆಗೆ ತಣ್ಣೀರು ಎರಚಿದ. ವಿವಾಹ ಮಂಟಪವನ್ನು ನೋಡಿ ಬೇರೇನನ್ನೋ ಚಿಂತಿಸಿ ಮನೆಯನ್ನು ಬಿಟ್ಟು, ಹೊರಟ, ತಪೋಮಗ್ನನಾದ. ಅವನನ್ನು ಚಂಚಲಗೊಳಿಸಲು ಬಂದ ಮನ್ಮಥನು ಮೃತನಾದ.

ಮಲ್ಲಿನಾಥನಿಗೆ ಕೇವಲ ಜ್ಞಾನ ಲಭಿಸಿತು. ಧರ್ಮಚಕ್ರ ಪ್ರವರ್ತನೆ ಮಾಡಿ, ಜೀವರಾಶಿಗಳಿಗೆ ಉಪದೇಶ ಮಾಡಿ ದೇಹವನ್ನು ತ್ಯಜಿಸಿ ಮೋಕ್ಷಕ್ಕೆ ಹೋದನು. ಇದಿಷ್ಟು ಕಾವ್ಯದ ಅಸ್ಥಿಪಂಜರ. ಈ ಅಸ್ಥಿಪಂಜರಕ್ಕೆ ಮಾಂಸ, ರಕ್ತ ತುಂಬಿ ಸುಂದರವಾದ ರೂಪನ್ನು ಕವಿಯು ದಾನ ಮಾಡುತ್ತಾನೆ. ಆಗ ಅಸ್ಥಿಪಂಜರವು ಸುಂದರ ಮನುಷ್ಯಾಕಾರವನ್ನು ಪಡೆದುಕೊಳ್ಳುತ್ತದೆ.

## ಕೃತಿ ಪರಿಚಯ 'ರಾಮಚಂದ್ರ ಚರಿತ ಪುರಾಣ'

### ಆಕರ

ರಾಮಚಂದ್ರ ಚರಿತ ಪುರಾಣಕ್ಕೆ 'ಪಂಪರಾಮಾಯಣ' ಎಂಬ ಹೆಸರೂ ಇದೆ. ಏಕೆಂದರೆ ನಾಗಚಂದ್ರನಿಗೆ ಅಭಿನವ ಪಂಪ ಎಂಬ ಬಿರುದು ಇದ್ದುದರಿಂದ ಅವನ ಕೃತಿಯನ್ನು ಹಾಗೆ ಕರೆಯಲಾಗಿದೆ. ಗುಣಭದ್ರಾಚಾರ್ಯರ ಉತ್ತರ ಪುರಾಣದಲ್ಲಿ ಮುನಿಸುವ್ರತನ ಕಥೆಯನ್ನು ಬರೆಯುವಾಗ ರಾಮಾಯಣದ

ಕಥೆಯನ್ನೂ ಹೇಳಿದ್ದಾನೆ. ಆದರೆ ಇದು ಕವಿಗಳನ್ನು ಆಕರ್ಷಿಸಲಾರದು. ವಿಮಲ ಸೂರಿಯ 'ಪಉಮಚರಿಯ' (ಪದ್ಮ ಚರಿತ್ರೆ) ಎಂಬ ಕೃತಿಯು ರಾಮಾಯಣದ ಕಥೆಯನ್ನು ಒಳಗೊಂಡಿದೆ. ರವಿಷೇಣನೂ ಕೂಡ 'ಪದ್ಮಪುರಾಣಮ್' ಎಂಬ ಕಾವ್ಯವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಇದರಲ್ಲಿಯೂ ರಾಮಾಯಣದ ಕಥೆಯಿದೆ. ನಾಗಚಂದ್ರನಿಗೆ ಇವರಿಬ್ಬರ ಕಾವ್ಯಗಳೂ ಆಕರಗಳಾಗಿವೆ.

## ಕಥಾವಸ್ತು

ರಾಮಾಯಣದ ಕಥೆಯು ಭಾರತೀಯರಿಗೆ ಚೆನ್ನಾಗಿ ಗೊತ್ತಿದೆ. ಇತ್ತೀಚೆಗೆ ಟಿ.ವಿ.ಗಳಲ್ಲಿಯೂ ರಾಮಾಯಣದ ಕಥೆಯ ಪ್ರಸಾರವು ಆಗಿರುವುದರಿಂದ ಅನಕ್ಷರಸ್ಥರೂ ಕೂಡ ಕೇಳಿ, ನೋಡಿ ತಿಳಿದುಕೊಂಡಿದ್ದಾರೆ. ನಿಮಗೆ ಇನ್ನೂ ಚನ್ನಾಗಿ ತಿಳಿದಿರಬೇಕಲ್ಲವೆ. ಆದರೂ ಪಂಪರಾಮಾಯಣವು ವಾಲ್ಮೀಕಿ ರಾಮಾಯಣಕ್ಕಿಂತ ಸ್ವಲ್ಪ ಬೇರೆಯಾಗಿದೆ. ಮೂಲ ಭೂತವಾದ ವ್ಯತ್ಯಾಸಗಳನ್ನು ಯಾವ ಕವಿಯೂ ಮಾಡುವುದಿಲ್ಲ. ಇದರಲ್ಲಿ ದಶರಥನ ರಾಣಿಯರ ಹೆಸರು ಅಪರಾಜಿತೆ, ಸುಮಿತ್ರೆ, ಸುಪ್ರಭೆ. ಇವರಲ್ಲದೆ ಸ್ವಯಂವರದಲ್ಲಿ ಗೆದ್ದು ಕೈಕೆಯನ್ನು ವಿವಾಹವಾಗುತ್ತಾನೆ. ರಾಮ, ಲಕ್ಷ್ಮಣ, ಶತ್ರುಘ್ನ, ಭರತ ಇವರು ಒಬ್ಬೊಬ್ಬ ರಾಣಿಯರ ಮಕ್ಕಳು.

ಜನಕನಿಗೆ ಪ್ರಭಾಮಂಡಲ ಎಂಬ ಮಗ, ಸೀತೆಯೆಂಬ ಮಗಳು. ಜನಕನಿಗೆ ಕಿರಾತರು ತೊಂದರೆ ಕೊಡುತ್ತಿದ್ದುದರಿಂದ ರಾಮಲಕ್ಷ್ಮಣರು ಅವರನ್ನು ಓಡಿಸಿ ಸೀತೆಯನ್ನು ಸ್ವಯಂವರದ ರೀತ್ಯಾ ರಾಮ ವಿವಾಹವಾದನು. ರಾಮ ಲಕ್ಷ್ಮಣ, ಸೀತೆ ಮೂವರೂ ಇಲ್ಲಿಯೂ ಅರಣ್ಯವಾಸಕ್ಕೆ ಹೋಗುತ್ತಾರೆ. ಶಂಬೂಕನನ್ನು ಲಕ್ಷ್ಮಣನು ತಿಳಿಯದೆ ಕೊಂದಾಗ ಅವನ ತಾಯಿ ಚಂದ್ರನಖಿ ಸೇಡು ತೀರಿಸಿಕೊಳ್ಳಲು ನಿರ್ಧರಿಸುತ್ತಾಳೆ. ಸೀತೆಯನ್ನು ರಾವಣನು ಅಪಹರಿಸುವುದು ಚಿನ್ನದ ಜಿಂಕೆಯ ತಂತ್ರದಿಂದಲ್ಲ. ಖರನನ್ನು ಎದುರಿಸಲು ಲಕ್ಷ್ಮಣನು ಹೋಗುವಾಗ ಅಪಾಯವೊದಗಿದರೆ ಸಿಂಹನಾದ ಮಾಡುವೆನೆಂದು ಹೇಳಿದ್ದುದನ್ನು ತಿಳಿದು ರಾವಣನು ಅದೇ ತಂತ್ರವನ್ನು ಪ್ರಯೋಗಿಸಿ ರಾಮನನ್ನು ಸೀತೆಯಿಂದ ದೂರಮಾಡಿ ಅಪಹರಿಸುತ್ತಾನೆ. ರಾವಣನನ್ನು ಲಕ್ಷ್ಮಣನು ಕೊಲ್ಲುತ್ತಾನೆ, ರಾಮನಲ್ಲ. ಏಕೆಂದರೆ ಕೊಲೆ ಮಾಡಿದವನು ನರಕಕ್ಕೆ ಹೋಗಬೇಕಲ್ಲ. ಲಂಕೆಗೆ ಕಪಿಧ್ವಜರು ಹೋದದ್ದು ಸೇತುವೆಯ ಮೇಲೆ ಅಲ್ಲ. ಅವರು ಆಕಾಶಗಾಮಿನೀ ವಿದ್ಯೆಯಿಂದ ಹೋಗುತ್ತಾರೆ. ಅಂಜನೇಯ ಇಲ್ಲಿ ಬ್ರಹ್ಮಚಾರಿ ಅಲ್ಲ. ಅವನು ಲಂಕೆಯನ್ನು ತನ್ನ ವಿದ್ಯಾಬಲದಿಂದ ಸುಡುತ್ತಾನೆ. ಸೀತೆಯು ಭೂಮಿಯಲ್ಲಿ ಸೇರಿಹೋಗುವುದಿಲ್ಲ. ಅವಳು ಸನ್ಯಾಸಿಯಾಗಿ ಇಂದ್ರಪದವಿಯನ್ನು ಪಡೆಯುತ್ತಾಳೆ. ಕಪಿಗಳು ಆಕೃತಿಯಲ್ಲಿ ಕಪಿಗಳಲ್ಲ. ಅವರು ಕಪಿ ಧ್ವಜವನ್ನು ಹೊಂದಿದ್ದುದರಿಂದ ಹಾಗೆ ಕರೆಯುತ್ತಾರೆ. ಅಲ್ಲದೆ ಅವರು ರಾವಣನ ಬಂಧುಗಳು, ಸಾಮಂತರು. ಸೀತೆಯನ್ನು ತ್ಯಜಿಸುವ ಪ್ರಸಂಗವು ಇಲ್ಲೂ ಇದೆ. ಆದರೆ ವಾಲ್ಮೀಕಿಯ ವಿಷಯವಿಲ್ಲ. ವಜ್ರಜಂಘನ ಆಶ್ರಯದಲ್ಲಿರುತ್ತಾಳೆ. ಲವಕುಶರು ತಮ್ಮ ತಾಯಿಯ ಅವಮಾನಕ್ಕೆ ರಾಮನು ಕಾರಣನೆಂದು ತಿಳಿದು ಯುದ್ಧ ಸಾರಿ ಗೆಲ್ಲುತ್ತಾರೆ. ಸೀತೆಯು ಸನ್ಯಾಸಿನಿಯಾದಂತೆ ರಾಮನೂ ಕೂಡ ದೀಕ್ಷೆ ಪಡೆದು ಸನ್ಯಾಸಿಯಾಗುತ್ತಾನೆ.

## ಸನ್ನಿವೇಶ ನಿರ್ಮಾಣ

### ಅ) ರಾಮನ ವನವಾಸ ಪ್ರಸಂಗ

ರಾಮಾಯಣ ಕಥೆಯಲ್ಲಿ ಇದು ಅತ್ಯಂತ ಪ್ರಮುಖವಾದ ಮತ್ತು ಹೃದಯ - ವಿದ್ರಾವಕವಾದ ಭಾಗವೆಂಬುದು ತಿಳಿದೇ ಇದೆ. ನಾಗಚಂದ್ರನ ಕಾವ್ಯದಲ್ಲಿ ಇದು ಯಾವ ರೂಪವನ್ನು ಪಡೆದುಕೊಂಡಿದೆ ಎಂಬುದನ್ನು ನೋಡೋಣ. ದಶರಥನಿಗೆ ವೈರಾಗ್ಯವು ಮೂಡಿ, ತಪಸ್ಸು ಮಾಡಲು ಅರಣ್ಯಕ್ಕೆ ಹೋಗುವುದಾಗಿ ಘೋಷಿಸುತ್ತಾನೆ. ಅದಕ್ಕೆ ಮೊದಲು ರಾಮನಿಗೆ ಪಟ್ಟವನ್ನು ಕಟ್ಟಿ, ತನ್ನ ಜವಾಬ್ದಾರಿಯನ್ನು ವರ್ಗಾಯಿಸಲು ಬಯಸುತ್ತಾನೆ. ರಾಮನು ತನ್ನಲ್ಲಿ ತಂದೆಯ ಶಕ್ತಿ ಸಾಮರ್ಥ್ಯಗಳು

ಇಲ್ಲವೆಂದು ಹೇಳುತ್ತಾನೆ. ದಶರಥನು ತನ್ನ ನಿರ್ಧಾರದಿಂದ ಹಿಂದೆ ಹೆಜ್ಜೆಯನ್ನು ಇಡುವುದಿಲ್ಲ. ಆ ಸಂದರ್ಭದಲ್ಲಿ ಭರತನೂ ಕೂಡ ದಶರಥ ನೊಡನೆ ಹೊರಡಲು ಸಿದ್ಧನಾಗುತ್ತಾನೆ. ಇದು ಕೈಕೆಗೆ ತಿಳಿಯುತ್ತದೆ. ಮಗನನ್ನು ಹೀಗೆ ಕಳೆದುಕೊಳ್ಳಲು ಅವಳಿಗೆ ಸಾಧ್ಯವಾಗುವುದಿಲ್ಲ. ಅವಳಿಗೆ ಒಂದು ಉಪಾಯ ಹೊಳೆಯಿತು. ಭರತನನ್ನು ಉಳಿಸಿಕೊಳ್ಳಬೇಕಾದರೆ ಅವನಿಗೆ ರಾಜ್ಯದ ಹೊಣೆ ಬೀಳಬೇಕು. ಆಗ ಕರ್ತವ್ಯ ದೃಷ್ಟಿಯಿಂದ ಎಲ್ಲಿಗೂ ಹೋಗಲಾರನೆಂದು ಯೋಚಿಸುತ್ತಾಳೆ. ಆಗ ರಾಮನು ಇಲ್ಲೇ ಇದ್ದರೆ ಭರತನಿಗೆ ತೊಂದರೆ ಎಂದು ಭಾವಿಸಿ ರಾಮನನ್ನು ಕಾಡಿಗೆ ಕಳುಹಿಸಿಬೇಕೆಂಬ ಇನ್ನೊಂದು ವರವನ್ನೂ ಕೇಳುತ್ತಾಳೆ. ಭರತನು ತಪಸ್ಸಿಗೆ ಹೋಗುವ ಆಸೆಯನ್ನು ಹೊಂದಿಲ್ಲದಿದ್ದರೆ ಕೈಕೆಯು ವರಗಳನ್ನು ಕೇಳುವ ಸಂದರ್ಭ ಒದಗುತ್ತಿರಲಿಲ್ಲ. ರಾಮನು ಕಾಡಿಗೆ ಹೋಗುವುದೂ ತಪ್ಪಿ ಹೋಗುತ್ತಿತ್ತು. ಮಂಥರೆ ಪಾತ್ರ ಇಲ್ಲಿ ಬರುವುದಿಲ್ಲ.

**ಆ) ಉಪರಂಭೆಯ ಪ್ರಸಂಗ**

ರಾವಣನ ಗುಣಶೀಲಗಳನ್ನು ಪ್ರಕಟಿಸುವ ಈ ಪ್ರಸಂಗವು ಅವನನ್ನು ತುಂಬ ಉತ್ತಮ ವ್ಯಕ್ತಿಯನ್ನಾಗಿ ಬಿಂಬಿಸುತ್ತದೆ. ಉಪರಂಭೆಯು ನಳಕೂಬರನ ಪತ್ನಿ. ವಿವಾಹಿತಳಾಗಿದ್ದರೂ ರಾವಣನ ಬಗ್ಗೆ ಒಲವನ್ನು ಹೊಂದಿದ್ದಳು. ರಾವಣನು ದುರ್ಲಂಘ್ಯಪುರವನ್ನು ಗೆಲ್ಲಲು ಸೈನ್ಯಸಮೇತ ಬಂದು ಮುತ್ತಿಗೆ ಹಾಕಿದಾಗ ಉಪರಂಭೆಯು ತನ್ನ ಪ್ರೇಮವನ್ನು ದೂತಿಯ ಮೂಲಕ ಹೇಳಿ ಕಳುಹಿಸುತ್ತಾಳೆ. ರಾವಣನಿಗೆ ಇದರಿಂದ ದುಃಖವಾಗುತ್ತದೆ, ಪರಪುರುಷನೊಡನೆ ಹೀಗೆ ನಡೆದುಕೊಳ್ಳುವುದು ಅವಳಿಗೆ ತಕ್ಕುದಲ್ಲ ಎನ್ನುತ್ತಾನೆ. ವಿಭೀಷಣನು ಆಗ ಒಂದು ಉಪಾಯವನ್ನು ಸೂಚಿಸುತ್ತಾನೆ. ದುರ್ಲಂಘ್ಯಪುರವನ್ನು ನಳಕೂಬರನು ತನ್ನ ವಿದ್ಯಾಶಕ್ತಿಯಿಂದ ಅಭೇದ್ಯವನ್ನಾಗಿಸಿದ್ದಾನೆ. ಅದಕ್ಕೆ ಪ್ರತಿವಿದ್ಯೆಯನ್ನು ಕಲಿತುಕೊಳ್ಳಲು ಉಪರಂಭೆಯನ್ನು ಬಳಸಿಕೊಳ್ಳಬೇಕು ಎಂದು ಹೇಳುತ್ತಾನೆ. ರಾವಣನು ದೂತಿಯೊಡನೆ ಅವಳನ್ನು ತಾಯೆಂದು ಹೇಳುತ್ತಾನೆ ಇಲ್ಲಿ ತಾಯಿ + ಎಂದು ಎಂಬ ಅರ್ಥವನ್ನು ಇಟ್ಟುಹೇಳಿದ್ದಾನೆ. ಅವಳಿಂದ ಪ್ರತಿವಿದ್ಯೆಯನ್ನು ಕಲಿತು ಗೆಲುವನ್ನು ಸಾಧಿಸಿದ ನಂತರ ಅವಳಿಗೆ ಬುದ್ಧಿಯ ಮಾತುಗಳನ್ನು ಹೇಳಿ ಹಿಂದಕ್ಕೆ ಕಳುಹಿಸುತ್ತಾನೆ. ವಾಲ್ಮೀಕಿ ರಾಮಾಯಣವನ್ನು ಮಾತ್ರ ಓದಿರುವವರಿಗೆ ಇದು ಆಶ್ಚರ್ಯವನ್ನು ಉಂಟು ಮಾಡುತ್ತದೆ. ಸೀತೆಯನ್ನು ಕದ್ದ ರಾವಣನಿಗೂ ಉಪರಂಭೆಯನ್ನು ತಿರಸ್ಕರಿಸಿದ ರಾವಣನಿಗೂ ಎಲ್ಲಿಯ ಸಂಬಂಧ ಎನ್ನಿಸುತ್ತದೆ.

**ಇ) ರಾವಣನ ಪರಿವರ್ತನೆಯ ಸನ್ನಿವೇಶ**

ಸೀತೆಯನ್ನು ಪ್ರಮದವನದಲ್ಲಿ ಸೆರೆಯಿಟ್ಟು ರಾವಣ ಮತ್ತೊಮ್ಮೆ ಅಲ್ಲಿಗೆ ಬರುತ್ತಾನೆ. ಈ ಸಲ ಅವನು ಬಹುರೂಪಿಣೀ ವಿದ್ಯೆಯನ್ನು ಸಂಪಾದಿಸಿಕೊಂಡು ಅಜೇಯನಾದೆನೆಂದು ಭಾವಿಸಿದ್ದಾನೆ. ಈ ವಿಷಯವನ್ನು ಸೀತೆಗೆ ತಿಳಿಸಿ, ಇನ್ನು ರಾಮನ ಆಸೆಯನ್ನು ಬಿಡುವಂತೆ ಹೇಳುತ್ತಾನೆ. ಸೀತೆಯು ರಾಮನ ಪ್ರಾಣಕ್ಕೆ ಒದಗಿದ ಅಪಾಯವನ್ನು ಕಂಡು ತೀವ್ರವಾದ ಶೋಕೋದ್ವೇಗದಿಂದ ಮೂರ್ಛೆ ಹೋಗುತ್ತಾಳೆ. ಸೀತೆಯ ಪ್ರಾರ್ಥನೆ, ದುಸ್ಥಿತಿ, ಮಲಿನ ರೂಪ ಇತ್ಯಾದಿಗಳನ್ನು ನೋಡಿದ ರಾವಣನಿಗೆ ಅನುಕಂಪ ಮೂಡುತ್ತದೆ. ರಾವಣನು ಉದಾತ್ತ ವ್ಯಕ್ತಿ, ಹೇಗೋ ಸೀತೆಯ ಬಗ್ಗೆ ಅಪರಾಧವೆಸಗಿಬಿಟ್ಟಿದ್ದ, ಈಗ ಪುನಃ ತಿದ್ದಿಕೊಳ್ಳುತ್ತಿದ್ದಾನೆ ಎನ್ನುವ ರೀತಿಯಲ್ಲಿ ಕವಿಯು ಚಿತ್ರಿಸುತ್ತಾನೆ. ಕದಡಿದ ನೀರು ತಿಳಿಗೊಳ್ಳುವಂತೆ ಅವನ ಮನಸ್ಸು ಶುದ್ಧವಾಯಿತು. ಅವನು ಸೀತೆಯನ್ನು ಹೊಗಳುತ್ತಾನೆ, ತನ್ನನ್ನು ಬೈದುಕೊಳ್ಳುತ್ತಾನೆ. ಈಗಲೇ ಸೀತೆಯನ್ನು ಕೊಟ್ಟರೆ ಹೇಡಿತನವಾಗುತ್ತದೆ. ಆದ್ದರಿಂದ ರಾಮಲಕ್ಷ್ಮಣರನ್ನು ಸೋಲಿಸಿ ಅನಂತರ ಸೀತೆಯನ್ನು ಒಪ್ಪಿಸುತ್ತೇನೆ ಎಂದು ಹೇಳಿಕೊಳ್ಳುತ್ತಾನೆ.

**ಭಾಷೆ**

ನಾಗಚಂದ್ರನು ಸಂಸ್ಕೃತ ಮತ್ತು ಅಚ್ಚಕನ್ನಡದ ಹದನಾದ ಮಿಶ್ರಣವನ್ನು ಕಾವ್ಯ ಭಾಷೆಯನ್ನಾಗಿ ಮಾಡಿಕೊಂಡಿದ್ದಾನೆ. ಅಚ್ಚಕನ್ನಡದಲ್ಲಿಯೇ ಬರೆದಿರುವ ಅನೇಕ ಪದ್ಯಗಳಿವೆ. ಸಂಸ್ಕೃತ ಪಾಂಡಿತ್ಯವನ್ನು

ತೋರಿಸಬಲ್ಲನೆಂಬುದಕ್ಕೆ ಉದಾಹರಣೆಗಳಿವೆ. ಇದನ್ನು ಗದ್ಯಭಾಗದಲ್ಲಿ ಹೆಚ್ಚಾಗಿ ಕಾಣಬಹುದು. ತನ್ನ ಕಾವ್ಯದಲ್ಲಿ ಪದ ರಚನೆಯು 'ಹಂಸದ ತುಪ್ಪುಳದಂತೆ' ಮೃದುವಾಗಿರುತ್ತದೆ ಎಂದಿದ್ದಾನೆ. ಕರುಣ ರಸಕ್ಕೆ ಪೋಷಕವಾಗುವಂತೆ ಮೃದು ಪದ ಜೋಡಣೆ ಕಂಡುಬರುತ್ತದೆ. ಹೆಚ್ಚು ಬಳಕೆಯಲ್ಲಿರುವ ಅಲಂಕಾರಗಳನ್ನು ಕವಿಯು ಬಳಸಿಕೊಳ್ಳುತ್ತಾನೆ. ಕ್ಲಿಷ್ಟತೆಗೆ ಅವಕಾಶವನ್ನು ಕೊಟ್ಟಿಲ್ಲ.

## ಶೈಲಿ

ಚಂಪೂ ಛಂದಸ್ಸಿಗೆ ತನ್ನದೇ ಆದ ಒಂದು ಓಟವಿರುತ್ತದೆ. ಯಾವ ಕವಿ ಬರೆದರೂ ಆದರ ಮೂಲಭೂತ ನಡಿಗೆಶೈಲಿ ಬದಲಾಗುವುದಿಲ್ಲ. ಆದರೆ ಪದರಚನೆಯ ವೈಶಿಷ್ಟ್ಯದಿಂದಾಗಿ ಪರಿಣಾಮ ಬೇರೆ ಬೇರೆಯಾಗುತ್ತದೆ. ನಾಗಚಂದ್ರನ ವ್ಯಕ್ತಿತ್ವದ ಹಾಗೆ ಶೈಲಿಯೂ ಸರಳವಾದುದು. ಮಾಧುರ್ಯ, ಪ್ರಸಾದ್ ಗುಣಗಳು ಈ ಶೈಲಿಯ ಪ್ರಮುಖ ಲಕ್ಷಣಗಳು, ಭಕ್ತಿ, ಶೃಂಗಾರಗಳಿಗೆ ಉತ್ತಮವಾದ ಮಾಧ್ಯಮವೆನ್ನಿಸುವ ಶೈಲಿಯು ಇಲ್ಲಿದೆ. ಓಜೋನ್ವಿತವಾದ ಬಿರುಸು ಶೈಲಿಯು ಈ ಕವಿಗೆ ಒಗ್ಗುವುದಿಲ್ಲ. ಶ್ರುತಿಹಿತವಾದ ಶುದ್ಧಭಾವದ ಶೈಲಿಯನ್ನೂ ಕಾಣಬಹುದು. ಈ ಕವಿಯು ಧ್ವನಿಯನ್ನು ಇಟ್ಟು ಬರೆಯುವುದಕ್ಕಿಂತ ತೆರೆದ ಮಾತುಗಳಲ್ಲಿ ಹೇಳುತ್ತಾನೆ. ಶಾಂತರಸವೇ ಈತನಿಗೆ ಇಷ್ಟವಾದದ್ದು. ಉಳಿದ ರಸಗಳನ್ನು ಕನಸಿನಲ್ಲಿಯೂ ನೆನೆಯದಂತೆ ಮಾಡು ಎಂದು ಪ್ರಾರ್ಥಿಸಿದ್ದರೂ ಅದು ಈಡೇರಿದರೆ ಕಾವ್ಯ ಕೆಟ್ಟು ಹೋಗುತ್ತದೆ. ಕವಿ ಸನ್ಯಾಸಿಯಲ್ಲ. ಸನ್ಯಾಸಿಗೆ ಶಾಂತರಸ ಸಾಕು ಆದರೆ ಕವಿಯು ಸಹೃದಯರನ್ನು ರಂಜಿಸುವ ಕರ್ತವ್ಯವನ್ನು ಮಾಡಬೇಕಾಗಿದೆ. ನವರಸಗಳೂ ಬೇಕಾಗುತ್ತದೆ. ಒಟ್ಟಾರೆ ನಾಗಚಂದ್ರನು ಪಾಂಡಿತ್ಯಪೂರ್ಣ ಶೈಲಿಯನ್ನು ಬಳಸದೆ ಸರಳವಾದ, ಸೌಮ್ಯವಾದ ಶೈಲಿಯನ್ನು ಬಳಸಿರುವುದು ಎರಡೂ ಕಾವ್ಯಗಳಲ್ಲಿ ಕಂಡು ಬರುತ್ತದೆ.

## ಕೃತಿಯ ಮಹತ್ವ

ಮಲ್ಲಿನಾಥಪುರಾಣವು ಒಳಗೊಂಡಿರುವ ಕಥಾಭಾಗವು ತುಂಬಾ ಕಡಿಮೆ. ಒಂದು ಕೃತಿಯು ಮಹಾಕಾವ್ಯವೆನ್ನಿಸಿಕೊಳ್ಳಲು ಗಾತ್ರವೂ ಮುಖ್ಯವಾದುದರಿಂದ ಕವಿಗಳು ಕಥಾಭಾಗದ ಅರಕೆಯನ್ನು ವರ್ಣನಾಭಾಗದಿಂದ ತುಂಬುತ್ತಾರೆ. ಈ ಕಾವ್ಯದಲ್ಲಿಯೂ ವರ್ಣನೆಗಳು ವಿಸ್ತಾರವಾಗಿ ಬಂದಿವೆ. ಪ್ರಕೃತಿಗೆ ಸಂಬಂಧಪಟ್ಟ ಎಲ್ಲ ಅಂಶಗಳನ್ನೂ ಸಾವಧಾನವಾಗಿ ಶಬ್ದಚಿತ್ರಗಳನ್ನಾಗಿ ಮಾಡಿದ್ದಾನೆ. ಕೆಲವು ಕಡೆ ವಸ್ತುವಿಗಿಂತ ಶಬ್ದದ ಹೆಚ್ಚುಗಾರಿಕೆ ಕಂಡು ಬರುತ್ತದೆ.

ರಾಮಚಂದ್ರ ಚರಿತ ಪುರಾಣವು ಪಂಪ, ರನ್ನ ಕವಿಗಳ ಹಾಗೆ ಲೌಕಿಕ ಕಾವ್ಯವಾಗಿದೆ. ಜೈನಮತಕ್ಕೆ ತೀರ್ಥಕರನಿಗೆ ಸಂಬಂಧಪಡದ ಕೃತಿ ಲೌಕಿಕ ಕೃತಿ ಎಂಬ ಅರ್ಥದಲ್ಲಿ ಮಾತ್ರ ಹೀಗೆ ಹೇಳಬಹುದು. ಇದರಲ್ಲಿ ಬರುವ ಪಾತ್ರಗಳೆಲ್ಲ ಜೈನ ಮತಾನುಯಾಯಿಗಳು. ರಾಮ, ಲಕ್ಷ್ಮಣ, ರಾವಣರು ಶಲಾಕಾಪುರುಷರು. ಸೀತೆಗೂ ಜೈನ ಧರ್ಮದಲ್ಲಿ ಶ್ರದ್ಧೆ. ಪೊನ್ನ ಕವಿಯ ಭುವನೈಕ ರಾಮಾಭ್ಯುದಯವು ಸಿಕ್ಕದಿರುವುದರಿಂದ ಪಂಪರಾಮಾಯಣವೇ ಪ್ರಥಮ ಜೈನ ರಾಮಾಯಣವಾಗಿದೆ. ಪಂಪರಾಮಾಯಣ ಎಂದಾಗ ಆದಿ ಕವಿ ಪಂಪನು ಬರೆದದ್ದು ಎಂದು ತಪ್ಪು ತಿಳಿಯಬಾರದು. ನಾಗಚಂದ್ರನನ್ನು ಅಭಿನವ ಪಂಪ ಎಂದು ಕರೆದಿರುವುದರಿಂದ ರೂಢಿಯಲ್ಲಿ ಅವನ ರಾಮಾಯಣವನ್ನು ಪಂಪರಾಮಾಯಣವೆಂದು ಕರೆಯಲಾಗಿದೆ.

ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ನಾಗಚಂದ್ರನು ಕಾವ್ಯವು ಹೇಗಿರಬೇಕು ಎಂಬುದನ್ನು ಬಹಳ ಸೊಗಸಾಗಿ ವರ್ಣಿಸಿದ್ದಾನೆ. ಇದನ್ನು ನಾಗಚಂದ್ರನ ಕಾವ್ಯಮೀಮಾಂಸೆ ಎನ್ನುವುದೂ ಉಂಟು. ಆತನ ಪ್ರಕಾರ ಕವಿಯು ಧರ್ಮಪ್ರಸಾರ ಮಾಡಬೇಕು, ಉತ್ತಮವಾದ ಕಥೆಯನ್ನು ಆಯ್ದುಕೊಳ್ಳಬೇಕು. ನಾಯಕನು ಉದಾತ್ತನಾಗಿರಬೇಕು. ಏಕೆಂದರೆ ಕುತ್ತಿಗೆಯ ಮಾಲೆಯು ಚಿನ್ನದ್ದಾಗಿದ್ದರೆ ಸಿಗುವ ಬೆಲೆಯು ಕಬ್ಬಿಣದ ಹಾರಕ್ಕೆ ಸಿಗುವುದಿಲ್ಲ, ಹಾರ ಎಷ್ಟೆ ಕಲಾತ್ಮಕವಾಗಿದ್ದರೂ ಯಾವ ವಸ್ತುವಿನಿಂದ ಮಾಡಿದೆ

ಎಂಬುದು ಮುಖ್ಯ. ಮನುಷ್ಯರನ್ನು ಸನ್ಮಾರ್ಗಕ್ಕೆ ಹಚ್ಚುವ ಕೆಲಸ ಕಾವ್ಯದಿಂದ ಆಗಬೇಕು; ದುರ್ಮಾರ್ಗಕ್ಕೆ ಒಯ್ಯುವುದಾದರೆ 'ವಿಷದ ಉದ್ಯಾನವನವನ್ನು ಬೆಳೆಸಿದಂತೆ' ಎಂದು ಹೇಳಿದ್ದಾನೆ. ರಸವತ್ತಾದ ಭಾವಗಳನ್ನು ಸುಂದರವಾದ ಮಾತುಗಳಲ್ಲಿ ಹೇಳಬೇಕು. ನೀರಸವಾದುದನ್ನು ಹೇಳಿ ಬೇಸರ ಉಂಟು ಮಾಡಬಾರದು. ಶಾಂತರಸವೇ ಮುಖ್ಯವಾದುದು, ಅದು ಪುಣ್ಯಕ್ಕೆ ಕಾರಣ, ಉಳಿದ ರಸಗಳು ಶಾಂತದಲ್ಲಿ ಲೀನವಾಗುತ್ತವೆ. ಎಂದಿದ್ದಾನೆ.

ಮಲ್ಲಿನಾಥ ಪುರಾಣವು ತೀರ್ಥಂಕರ ಚರಿತೆಯಾಗಿ ಕನ್ನಡ ಸಾಹಿತ್ಯಕ್ಕೆ ಉತ್ತಮ ಕೊಡುಗೆಯಾಗಿದೆ. ರಾಮಚಂದ್ರ ಚರಿತ ಪುರಾಣವು ಪ್ರಥಮ ಜೈನ ರಾಮಾಯಣವಾಗಿ ಮಹತ್ವ ಪೂರ್ಣವಾದ ಕಾಣಿಕೆಯಾಗಿದೆ.

## 2.3.4 ಕೃತಿ ವಿಮರ್ಶೆ

ಮಲ್ಲಿನಾಥಪುರಾಣವು ಕವಿಯ ಪ್ರಥಮ ಕೃತಿ ಎನ್ನುವುದು ಬಹುಪಾಲು ಒಪ್ಪಿಗೆಯಾದ ವಿಷಯವಾಗಿದೆ. ಕಷ್ಟ ಭಾಗವು ತುಂಬಾ ಕಡಿಮೆ. ಆದ್ದರಿಂದ ವರ್ಣನೆಗಳಿಂದಲೇ ಕಾವ್ಯವನ್ನು ತುಂಬಲು ಯತ್ನಿಸಿರುವುದರಿಂದ ಕಥಾಹಂದರ ಕಡಿಮೆಯಾಗುವ ಸಂಭವ ಜಾಸ್ತಿ. ಅಸಾಧಾರಣವಾದ ಕಲ್ಪನಾ ಶಕ್ತಿಯಿದ್ದರೂ ಮೂಲದಲ್ಲಿ ಅಗತ್ಯವಾದ ದ್ರವ್ಯವು ಕಡಿಮೆ. ಹಾಗಾದಾಗ ಕಾವ್ಯ ಜಾಳು ಜಾಳು ಆಗುವುದನ್ನು ತಪ್ಪಿಸಲಾಗದು. ವಿಷಯವು ಹೆಚ್ಚಾಗಿದ್ದು ಮಾತು ಕಡಿಮೆಯಿದ್ದಾಗ ಆ ಮಾತು ಸಾಂದ್ರವಾದ ಭಾವದಿಂದ ತುಂಬಿರಬೇಕಾಗುತ್ತದೆ. ಅನ್ಯವಿಚಾರಗಳ ಹಂಬಲವೂ ಕಡಿಮೆಯಾಗುತ್ತದೆ. ದೃಷ್ಟಿ ನೇರವಾಗಿದ್ದು ನಡೆಯೂ ನೆರವಾಗಿರುತ್ತದೆ. ಆಗಿಲ್ಲದಿರುವುದರಿಂದ ಮಲ್ಲಿನಾಥ ಪುರಾಣವು ಒಂದು ಸಾಮಾನ್ಯ ಕೃತಿಯಾಗಿ ಉಳಿದು ಬಿಟ್ಟಿತು.

ರಾಮಚಂದ್ರ ಪುರಾಣವು ವಿಮಲ ಸೂರಿ ಕವಿಯ 'ಪಉಮ ಚರಿಅ' (ಪದ್ಮಚರಿತೆಯನ್ನು ಅನುಸರಿಸುತ್ತದೆ. ರವಿಷೇಣ ಕವಿಯ 'ಪದ್ಮ ಪುರಾಣಂ' ಕಾವ್ಯದಿಂದಲೂ ಪ್ರಭಾವಿತವಾಗಿದೆ, ಹಾಗೂ ವಾಲ್ಮೀಕಿ ರಾಮಾಯಣವನ್ನೂ ಕವಿಯು ಅಧ್ಯಯನ ಮಾಡಿದ್ದಾನೆ. ಈ ಕಾರಣಗಳಿಂದ ರಾ.ಚ. ಪುರಾಣವು ಉತ್ತಮ ಕಾವ್ಯವಾಗಿ ಮೂಡಿ ಬಂದಿದೆ. ಈ ಕಾವ್ಯವು ಕವಿಯ ಸಂಗ್ರಹ ಚಾತುರ್ಯಕ್ಕೆ ನಿದರ್ಶನವಾಗಿದೆ. ವರ್ಣನೆಗಳನ್ನು ನೋಡಿದರೆ ಕವಿಯ ಚಿತ್ರಕಶಕ್ತಿಯ ಪರಿಚಯವಾಗುತ್ತದೆ. ಬಾಲಲೀಲೆ, ಸ್ವಯಂವರ, ಸೀತಾಪಹರಣ, ರಾವಣನ ಮನೋ ಪರಿವರ್ತನೆ ಮುಂತಾದ ಸನ್ನಿವೇಶಗಳನ್ನು ನೋಡಬಹುದು. ಕೆಲವು ಸಲ ಸಂಗ್ರಹಶೀಲತೆಯಿಂದಾಗಿ ನಷ್ಟವೂ ಆಗುವುದುಂಟು. ರಾಮಲಕ್ಷ್ಮಣರು ನರ್ತಕಿಯಾರಾದ ಸಂದರ್ಭ, ಹೋಗಿವೆ. ಪಾತ್ರ ಚಿತ್ರಣವನ್ನು ಕವಿಯು ಉತ್ತಮ ರೀತಿಯಲ್ಲಿ ನಿರ್ವಹಿಸಿದ್ದಾನೆ. ಅದರಲ್ಲಿಯೂ ರಾವಣನ ಚಿತ್ರಣವು ಅಮೋಘವಾಗಿದೆ. ಕುವೆಂಪು ಅವರಿಗೆ ಇಲ್ಲಿಂದಲೇ ಪ್ರೇರಣೆ ದೊರೆತಿದೆ ಎಂಬುದನ್ನು ಮರೆಯುವಂತಿಲ್ಲ. ಆ ಪಾತ್ರ ಚಿತ್ರಣದಲ್ಲಿ ಮೆರೆದಿರುವ ಕಲಾತ್ಮಕತೆ ಅಮೋಘವಾದುದು, ಕೆಲವು ವಿಷಯಗಳನ್ನು ವರ್ಣಿಸಿ ತಿಳಿಸಲು ಸಾಧ್ಯವಾಗುವುದಿಲ್ಲ. ಸಹೃದಯರ ಮನಸ್ಸಿನಲ್ಲಿ ಮೂಡುವ ಭಾವನೆಗಳನ್ನು ತಾರ್ಕಿಕವಾಗಿ ಹೇಳಲು ಆಗದೆ ಇರುವುದೂ ಉಂಟು. ನಾಗಚಂದ್ರ ಕವಿಯ ಕೃತಿಗಳು ತುಂಬಾ ಶ್ರೇಷ್ಠವಾಗಿವೆ ಎಂದು ಹೇಳುವವರು ಇರುವ ಹಾಗೆ, ಅವುಗಳು ಸಾಧಾರಣ ಕೃತಿಗಳು ಎಂದು ಹೇಳುವವರೂ ಇರುತ್ತಾರೆ. ಆದಿಕವಿ ಪಂಪನ ಕಾವ್ಯಗಳನ್ನು ಅಧ್ಯಯನ ಮಾಡಿದ ನಂತರ ಇತರರ ಕಾವ್ಯಗಳನ್ನು ಓದಿದರೆ ಪಂಪನ ಶ್ರೇಷ್ಠತೆ ಮನದಟ್ಟಾಗುತ್ತದೆ. ಆ ದೃಷ್ಟಿಯಿಂದ ನೋಡಿದಾಗ ಮಲ್ಲಿನಾಥ ಪುರಾಣ, ರಾ.ಚ. ಪುರಾಣಗಳು ಆದಿಪಂಪನ ಕೃತಿಗಳಿಗೆ ಸಮವಲ್ಲವೆಂಬುದು ತಿಳಿಯುತ್ತದೆ. ಆದಿಪಂಪನ ಸ್ಥಾನಕ್ಕಿಂತ ಸ್ವಲ್ಪ ಕೆಳಗಿನ ಸ್ಥಾನದಲ್ಲಿ ನಾಗಚಂದ್ರ ಕವಿಯು ನಿಲ್ಲುತ್ತಾನೆಯೇ ಹೊರತು ತುಂಬಾ ಕೆಳಗಿನ ಸ್ಥಾನದಲ್ಲಲ್ಲ ಎಂದು ಹೇಳಬಹುದು.

## 2.4 ನಯಸೇನ ಕವಿ, ಕಾಲ, ದೇಶ, ಕೃತಿ ವಿಚಾರ

### 2.4.1 ಕಾಲ

ನಯಸೇನನು ತನ್ನ ಕಾವ್ಯವಾದ 'ಧರ್ಮಾಮೃತ'ದಲ್ಲಿ ಪರೋಕ್ಷವಾಗಿ ತನ್ನ ಕಾಲವನ್ನು ಸೂಚಿಸಿದ್ದಾನೆ. ಅದರ ಪ್ರಕಾರ ಆತನ ಕಾಲವು ಅಂದರೆ ಕೃತಿ ರಚನೆಯ ಕಾಲವು ಶಾಲಿವಾಹನ ಶಕ 1034 ಆಗುತ್ತದೆ. ಅಂದರೆ ಕ್ರಿ.ಶ. 1112 ನೇ ಇಸವಿಯಾಗುತ್ತದೆ.

### 2.4.2 ದೇಶ

ನಯಸೇನನು ಒಂದು ಪದ್ಯದಲ್ಲಿ 'ಮುಳುಗುಂದ ದೊಳಿರ್ದು...' ಎಂದು ಹೇಳಿರುವುದರಿಂದ ಗದಗ ಜಿಲ್ಲೆಯ ಮುಲಗುಂದವು ಕವಿಯ ಊರು ಎಂದು ತಿಳಿಯಬಹುದು. ಆತನು ಜೈನ ಸನ್ಯಾಸಿಯಾಗಿದ್ದನೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಆತನು ತನ್ನ ತಂದೆ ತಾಯಿಗಳ ಹೆಸರನ್ನು ಹೇಳಿಕೊಂಡಿಲ್ಲ. ಆದರೆ ಗುರುಗಳ ಹೆಸರನ್ನು ತಿಳಿಸಿದ್ದಾನೆ. ನರೇಂದ್ರಸೇನ ಮುನಿಯೇ ಆತನ ಗುರು. ಆತನು ಪಂಪ, ರನ್ನ ಮುಂತಾದ ಕವಿಗಳನ್ನು ಸ್ಮರಿಸಿಕೊಂಡಿದ್ದಾನೆ ಈ ಕವಿಗೆ 'ಸುಕವಿ ಜನ ಮನೋಪದ್ಮಿನೀ ರಾಜಹಂಸ', 'ಸುಕವಿ ನಿಕರ ಪಿಕಮಾಕಂದ' ಎಂಬ ಬಿರುದುಗಳಿದ್ದುವು.

### 2.4.3 ಕೃತಿಗಳು

ನಯಸೇನನು ಧರ್ಮಾಮೃತ ಎಂಬ ಕಾವ್ಯವನ್ನು ಬರೆದಿದ್ದಾನೆ. ಆತನು ರಚಿಸಿದ್ದಾನೆನ್ನಲಾದ ವ್ಯಾಕರಣ ಗ್ರಂಥವು ಸಿಕ್ಕಿರುವುದರಿಂದ, ಧರ್ಮಾಮೃತವೊಂದೇ ಆತನ ಕಾವ್ಯ ಕೃತಿ ಎಂದು ತಿಳಿಯಬೇಕಾಗಿದೆ. ಇದರಲ್ಲಿ ೧೪ ಆಶ್ವಾಗಳಿವೆ. ಚಂಪೂ ಛಂದಸ್ಸಿನಲ್ಲಿ ರಚಿಸಲಾಗಿದೆ.

#### ಆಕರ

ನಯಸೇನನು ಯಾವುದೇ ಒಂದು ಗ್ರಂಥದಿಂದ ತನ್ನ ಕಾವ್ಯಕ್ಕೆ ವಸ್ತುವನ್ನು ಆರಿಸಿಕೊಂಡಿಲ್ಲ. ಬೇರೆ ಬೇರೆ ಮೂಲಗಳಿಂದ, ಪ್ರಚಲಿತ ಕಥೆಗಳನ್ನು ತೆಗೆದುಕೊಂಡು ಎಲ್ಲವನ್ನೂ ಒಂದು ಸೂತ್ರಕ್ಕೆ ತಂದು ಹೊಸ ರೀತಿಯಲ್ಲಿ ಬರೆದಿದ್ದಾನೆ.

#### ಕಥಾವಸ್ತು

ಜೈನಮತಕ್ಕೆ ಸೇರಿದ ಶಾಸ್ತ್ರದಲ್ಲಿ ಬರುವ ಸಮ್ಯಗ್ದರ್ಶನ, ಅದರ ಎಂಟು ಅಂಗಗಳ ಮತ್ತು ಐದು ಅಣುವ್ರತಗಳ ಮಹಿಮೆಯನ್ನು ವರ್ಣಿಸುವ ೧೪ ಕಥೆಗಳು ಈ ಕಾವ್ಯದಲ್ಲಿವೆ. ಅಂದರೆ ಒಂದೊಂದು ಆಶ್ವಾಸದಲ್ಲಿ ಒಂದೊಂದು ಕಥೆಗಳಿವೆ. ಅವುಗಳು ಯಾವುವೆಂದರೆ ದರ್ಶನದ ಕಥೆ, ನಿಶ್ಶಂಕೆಯ ಕಥೆ, ನಿಷ್ಕಾಂಕ್ಷೆಯ ಕಥೆ, ನಿರ್ವಿಚಿಕಿತ್ಸೆಯ ಕಥೆ, ಅಮೂಢ ದೃಷ್ಟಿಯ ಕಥೆ, ಉಪಗೂಹನದ ಕಥೆ, ಸ್ಥಿತಿಕರಣದ ಕಥೆ, ವಾತ್ಸಲ್ಯದ ಕಥೆ, ಪ್ರಭಾವನೆಯ ಕಥೆ, ಅಹಿಂಸಾವ್ರತದ ಕತೆ, ಸತ್ಯವ್ರತದ ಕಥೆ, ಅಸ್ತೇಯ ವ್ರತದ ಕಥೆ, ಬ್ರಹ್ಮಚರ್ಯ ವ್ರತದ ಕಥೆ, ಅಪರಿಗ್ರಹ ವ್ರತದ ಕಥೆ, ಈ ಹದಿನಾಲ್ಕು ಕಥೆಗಳು ಸೇರಿ ಧರ್ಮಾಮೃತ ಕೃತಿಯಾಗಿದೆ. ಈ ಕಥೆಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಸಂಗ್ರಹಿಸೋಣ. ದರ್ಶನದ ಕಥೆಯಲ್ಲಿ ದಯಾಮಿತ್ರ ಶೆಟ್ಟಿ ಮತ್ತು ವಸುಭೂತಿ ಇವರಿಬ್ಬರ ಸ್ಪರ್ಧೆಯ ವಿಷಯವಿದೆ. ವಸುಭೂತಿ ವೈದಿಕ ಮತಕ್ಕೆ ಸೇರಿದವನು, ಸೆಟ್ಟಿಯು ಜೈನಮತಾನುಯಾಯಿ. ಮತದ ಹಂತದಲ್ಲಿ ನಿಂತವರು ಆಚಾರಗಳನ್ನು ಪ್ರೀತಿಸುತ್ತಾರೆ, ಅವಲಂಬಿಸುತ್ತಾರೆ. ಆಚಾರ ಕೆಡುವಂತಿಲ್ಲ; ಕೆಟ್ಟರೆ ಸರ್ವನಾಶ ಎಂಬ ಭಾವನೆ ಇರುತ್ತದೆ. ಮನುಷ್ಯರು ಹೆಚ್ಚಾಗಿ ಭಾವನೆಗಳನ್ನು ಬಿಟ್ಟು, ಬದುಕಲಾರರು, ಸೆಟ್ಟಿಯು ಮಾಡುತ್ತಿದ್ದ ಆಚರಣೆಗಳನ್ನು ಅನ್ಯಮತದವನಾದ ವಸುಭೂತಿ ಸ್ವಲ್ಪ ಲಘುವಾಗಿ ಕಾಣುತ್ತಾನೆ. ಸೆಟ್ಟಿಗೆ ಒಂದು ರೀತಿ ಅವಮಾನವಾಗುತ್ತದೆ. ಹೇರಳವಾದ ದ್ರವ್ಯದ ಆಸೆ ತೋರಿಸಿ ಒಂದು ವ್ರತವನ್ನು ಆಚರಿಸಿ

ತೋರಿಸುವಂತೆ ಹೇಳುತ್ತಾನೆ. ವಸುಭೂತಿ ಒಪ್ಪಿ ತುಂಬಾ ಕಷ್ಟ ಸಂಕಟ ಅನುಭವಿಸಿ, ವ್ರತವನ್ನು ಬಿಟ್ಟುಬಿಡುತ್ತಾನೆ. ಆದರೂ ಸೆಟ್ಟಿಯ ವರ್ಣನೆಯನ್ನು ಕೇಳಿ ಜೈನ ಮತಾವಲಂಬಿಯಾಗುತ್ತಾನೆ.

ನಿಶ್ಶಂಕೆಯ ಕಥೆಯ ನಾಯಕ ಲಲಿತಾಂಗ. ರಾಜಕುಮಾರನಾದುದುರಿಂದ ಸ್ವೇಚ್ಛಾಚಾರಿಯಾಗಿ ವರ್ತಿಸಿ ದೇಶವನ್ನೇ ಬಿಟ್ಟು ಹೋಗುಬೇಕಾಗುತ್ತದೆ. ನೇಪಾಲದಲ್ಲಿ ಕಳ್ಳತನ ಮಾಡಿ ಬದುಕುಸಾಗಿಸುತ್ತಾನೆ. ಕೊನೆಗೆ ಜೈನಮುನಿಯ ಉಪದೇಶವನ್ನು ಕೇಳಿ ಜೈನ ಮತದಲ್ಲಿ ನಿಷ್ಠೆಯನ್ನು ಹೊಂದುತ್ತಾನೆ.

ನಿಷ್ಕಾಂಕ್ಷೆಯ ಕಥೆಯ ನಾಯಕಿ ಅನಂತಮತಿ. ಪ್ರಾಪಂಚಿಕ ಭೋಗ ಭಾಗ್ಯಗಳನ್ನು ತಿರಸ್ಕರಿಸಿ ವ್ರತ ನೇಮಗಳನ್ನು ಕೈಕೊಳ್ಳುತ್ತಾಳೆ. ದೀಕ್ಷೆಯನ್ನು ಪಡೆದು ಉತ್ತಮ ಗತಿಯನ್ನು ಹೊಂದುತ್ತಾಳೆ.

ನಿರ್ವಿಚಿಕಿತ್ಸೆಯ ಕಥೆಯ ಪ್ರಧಾನ ಪಾತ್ರಗಳು ಒಡ್ಡಾಯನ ಮಹಾರಾಜ ಮತ್ತು ರಾಣಿ ಪದ್ಮಾವತಿ. ಇಬ್ಬರೂ ಸದ್ಗುಣಿಗಳು. ಇಂದ್ರನೂ ಕೂಡ ಅವರನ್ನು ಅವರನ್ನು ಹೊಗಳುವಂತೆ ಬದುಕುತ್ತಾರೆ. ಈ ಹೊಗಳಿಕೆಯನ್ನು ಸಹಿಸದ ವಾಸವ ಎಂಬಾತನು ಕುಷ್ಠರೋಗಿಯ ವೇಷದಲ್ಲಿ ಆ ದಂಪತಿಗಳ ಸದ್ಗುಣದ ಪರೀಕ್ಷೆ ಮಾಡಲು ಇಚ್ಛಿಸುತ್ತಾನೆ. ರಾಜ ದಂಪತಿಗಳು ಪರೀಕ್ಷೆಯಲ್ಲಿ ಗೆದ್ದರೂ, ಕಡೆಯಲ್ಲಿ ದೀಕ್ಷೆಯನ್ನು ಸ್ವೀಕರಿಸುತ್ತಾರೆ.

ಅಮೂಢ ದೃಷ್ಟಿಯ ಕಥೆಯ ಪ್ರಧಾನ ಪಾತ್ರ ರೇವತಿ ಮಹಾದೇವಿ. ಅವಳು ರಾಣಿಯಾಗಿದ್ದಳು ಮತ್ತು ಮೂಢ ದೃಷ್ಟಿಯನ್ನು ಹೊಂದಿರಲಿಲ್ಲ 'ಒಬ್ಬ ವ್ಯಕ್ತಿಯು ಮಾರು ವೇಷಗಳನ್ನು ತೊಟ್ಟು ಬಂದಾಗಲೂ ರೇವತಿ ಮೋಸ ಹೋಗಲಿಲ್ಲ. ಅವನೇ ಅವಳನ್ನು ಹೊಗಳುತ್ತಾನೆ. ಅವಳು ದೀಕ್ಷೆಯನ್ನು ಸ್ವೀಕರಿಸಿ ಉತ್ತಮಗತಿಯನ್ನು ಪಡೆಯುತ್ತಾಳೆ.

ಉಪಗೂಹನದ ಕಥೆಯಲ್ಲಿ ಜಿನೇಂದ್ರ ಭಕ್ತ ಸೆಟ್ಟಿ ಎಂಬ ದೊಡ್ಡ ವರ್ತಕನು, ಜೈನಮತದಲ್ಲಿ ನಂಬಿಕೆಯನ್ನು ಇಡದಿದ್ದ ಸೂರ್ಪ ಕಳ್ಳನಿಗೆ ಉಪದೇಶ ಮಾಡಿ ಅವನ ಮನಸ್ಸನ್ನು ಪರಿವರ್ತಿಸಿ ಉತ್ತಮಗತಿಯನ್ನು ಪಡೆಯುವಂತೆ ಮಾಡುತ್ತಾನೆ.

ಸ್ಥಿತಿಕರಣದ ಕಥೆಯಲ್ಲಿ ವಾರಿಷೇಣ ಕುಮಾರನೇ ಪ್ರಮುಖ ಪಾತ್ರ ಅವನಿಗೆ 500 ಜನ ಪತ್ನಿಯರಿದ್ದರು. ಮುನಿಗಳ ಬೋಧನೆಯಿಂದ ಅವನು ಲೌಕಿಕ ಭೋಗಭಾಗ್ಯಗಳಿಗೆ ವಿಮುಖನಾಗಿ, ಸ್ನೇಹಿತನನ್ನೂ ನಿವೃತ್ತಿ ಮಾರ್ಗಕ್ಕೆ ಬರುವಂತೆ ಮಾಡಿ ಉತ್ತಮ ಗತಿಯನ್ನು ಪಡೆಯುತ್ತಾನೆ.

ವಾತ್ಸಲ್ಯದ ಕಥೆಯ ಪ್ರಧಾನ ಪಾತ್ರ ವಜ್ರಕುಮಾರ. ಅವನು ಒಬ್ಬ ರಾಣಿಯು ನಡೆಸಬೇಕೆಂದಿದ್ದ ಜಿನಪೂಜೆಗೆ ಬಂದಿದ್ದ ಅಡಚಣೆಗಳನ್ನು ಪರಿಹರಿಸಿ ಪೂಜೆಯು ಸಾಂಗವಾಗಿ ನಡೆಯುವಂತೆ ಮಾಡುತ್ತಾನೆ.

ಪ್ರಭಾವನೆಯ ಕಥೆಯಲ್ಲಿ ವಿಷ್ಣು ಕುಮಾರನು ತ್ರಿವಿಕ್ರಮ ಸ್ವರೂಪವನ್ನು ಪಡೆಯುವ ವಿಚಾರವಿದೆ. ಬಲಿ ಎಂಬಾತನು ಅಕಂಪನಾಚಾರ್ಯರೆಂಬ ಜೈನಮುನಿಯನ್ನು ಕೊಲ್ಲಲು ಯತ್ನಿಸಿದಾಗ ವಿಷ್ಣು ಕುಮಾರನು ಅದನ್ನು ತಡೆಯುತ್ತಾನೆ. ಎಲ್ಲರೂ ಅವನನ್ನು ಹೊಗಳುತ್ತಾರೆ.

ಅಹಿಂಸಾವ್ರತದ ಕಥೆಯು ಒಬ್ಬ ಮೀನುಗಾರನಿಗೆ ಸಂಬಂಧಿಸಿದೆ. ಅವನು ಯಾರೆಂಬುದನ್ನು ತಿಳಿಯಲು ಅವನ ಮುಂದಿನ ಜನ್ಮವನ್ನು ಕವಿ ವಿವರಿಸಿದ್ದಾನೆ. ಆತನೇ ಧನಕೀರ್ತಿಕುಮಾರ.

ಸತ್ಯವ್ರತದ ಕಥೆಯಲ್ಲಿ ಧನದ ಮಹಾರಾಜನು ಸತ್ಯವಂತನಾಗಿ ಬಾಳಿ ಸದ್ಗತಿಯನ್ನುಹೊಂದುತ್ತಾನೆ.

ಅಸ್ತೇಯ ವ್ರತದ ಕಥೆಯಲ್ಲಿ ಜಿನೇಂದ್ರದಾಸ ಎಂಬ ವರ್ತಕ ಕುಮಾರನ ವಿಚಾರವಿದೆ. ಅವನು ಶ್ರೀಮಂತನಾದರೂ ಕಳ್ಳತನ ಮಾಡುತ್ತಿದ್ದ. ಜೈನಮುನಿಯಿಂದ ಉಪದೇಶಾತ್ಮಕ ಕಥೆಗಳನ್ನು ಕೇಳಿ ಇಹಲೋಕದ ಭೋಗ ಭಾಗ್ಯಗಳನ್ನು ತೊರೆದು ತಪಸ್ಸಿಗೆ ತೆರಳುತ್ತಾನೆ.

ಬ್ರಹ್ಮಚರ್ಯ ವ್ರತದ ಕಥೆಯ ಪ್ರಧಾನ ಪಾತ್ರ ಪ್ರಮಾಥಿ ಕುಮಾರ. ಅವನು ದ್ರೋಣಾಚಾರ್ಯದಲ್ಲಿ ಚಾಪವಿದ್ಯೆಯನ್ನು ಕಲಿಯುತ್ತಾನೆ. ಅವನು ಸರ್ವತ್ಯಾಗ ಮಾಡಿ ದೀಕ್ಷೆ ಪಡೆದು ಉತ್ತಮ ಗತಿಗೆ ಹೋಗುತ್ತಾನೆ..

ಅಪರಿಗ್ರಹ ವ್ರತದ ಕಥೆಯಲ್ಲಿ ಉಪರಿಚರ ಮಹಾರಾಜನು ಅತಿಯಾದ ಲೌಕಿಕಾಸಕ್ತಿಯಿಂದ ಹಾವಾಗಿ ಹುಟ್ಟಿ, ತನ್ನ ಮುಂದಿನ ಜನ್ಮದಲ್ಲಿ ಮತ್ತೆ ಮನುಷ್ಯನಾಗಿ ಹುಟ್ಟುತ್ತಾನೆ. ಮುಂದಿನ ಜನ್ಮದಲ್ಲಿ ಅವನು ಮತ್ತೆ ಮಹಾರಾಜನಾಗುತ್ತಾನೆ. ಕೊನೆಗೆ ಅವನಿಗೆ ವೈರಾಗ್ಯವು ಬಂದು ತಪಸ್ಸಿಗೆ ಹೋಗುತ್ತಾನೆ (ಉತ್ತಮ ಗತಿಯನ್ನು ಪಡೆಯುತ್ತಾನೆ).

### ಭಾಷೆ

ನಯಸೇನನ ಹೇಳಿಕೆಯೊಂದು ತುಂಬಾ ಪ್ರಸಿದ್ಧವಾಗಿದೆ. ಕನ್ನಡ ಕವಿಗಳು ಮೊದಲಿನಿಂದಲೂ ಸಂಸ್ಕೃತವನ್ನು ಬಿಡಲಾಗದ, ಅದಕ್ಕೆ ಅಂಟಿಕೊಳ್ಳಲಾಗದ ಉಭಯ ಸಂಕಟವನ್ನು ಅನುಭವಿಸುತ್ತಿದ್ದುದು ಅವರ ಮಾತುಗಳಲ್ಲಿ ಕಂಡು ಬರುತ್ತದೆ. ಈ ದಿನಗಳಲ್ಲಿ ಇಂಗ್ಲಿಷನ್ನು ಬಿಡಲಾಗದ, ಕನ್ನಡವನ್ನು ಕಡೆಗಣಿಸಿಲಾಗದ ಮನಃಸ್ಥಿತಿಯನ್ನು ಆ ಕಾಲದಲ್ಲಿ ಕವಿಗಳು ಸಂಸ್ಕೃತದ ಬಗ್ಗೆಹೊಂದಿದ್ದರು. ಕೆಲವರು ದೇಸಿಯನ್ನು ಸೇರಿಸಿದ್ದೇವೆ ಎಂದಿದ್ದಾರೆ, ಕೆಲವರು ಸಂಸ್ಕೃತದೊಳೇನುಂಟು ಎಂದಿದ್ದಾರೆ. ಕೆಲವರು ಸಮನ್ವಯ ಸಾಧಿಸಿದ್ದೇವೆ ಎಂದಿದ್ದಾರೆ. ಅತಿಯಾದ ಸಂಸ್ಕೃತದ ಬಳಕೆ ಸಾಧುವಲ್ಲ ಎಂಬುದು ನಯಸೇನನ ಅಭಿಪ್ರಾಯ. 'ಬೆರಸಲ್ಕೆ ತಕ್ಕುದೇ ಘ್ರುತಮುಮಂ ತೈಲಮುಮಂ' ಎಂದಿರುವುದು ಸರಿಯಾದರೂ ಸಂಸ್ಕೃತ ಶಬ್ದಗಳು ಕನ್ನಡ ಶಬ್ದ ಕೋಶದಲ್ಲಿ ಸೇರಿ ಕನ್ನಡ ಶಬ್ದಗಳೇ ಆಗಿಬಿಟ್ಟಿವೆ. ದತ್ತುಪುತ್ರನೇ ಆದರೂ ಮಗನೇ ತಾನೆ. ನಯಸೇನನೂ ಕೂಡ ಸಂಸ್ಕೃತ ಶಬ್ದಗಳನ್ನು ಪೂರ್ಣವಾಗಿ ಬಿಟ್ಟಿಲ್ಲ. 'ಕನ್ನಡದೊಳ್ ಒಪ್ಪಂಬೆತ್ತು ಜಾಣ್ ಮಾತಿನಿಂ ಪಲವುಂ ದೇಸಿಯಂ' ಬರೆದಿರುವುದು ಕಂಡು ಬರುತ್ತದೆ.

### ಶೈಲಿ

ನಯಸೇನನು ತನಗಿಂತ ಹಿಂದೆ ಇದ್ದ ಕವಿಗಳ ಹಾಗೆ ಪಾಂಡಿತ್ಯಕ್ಕೆ ಹೆಚ್ಚು ಮನ್ನಣೆಯನ್ನು ಕೊಟ್ಟಿಲ್ಲ. ತನ್ನ ಕಾವ್ಯದ ನೀತಿಯನ್ನು ಕುರಿತು ದೇಸಿವೆತ್ತ ಪೊಸನುಡಿ ಎಂದಿದ್ದಾನೆ. ಜಾನಪದ ಸ್ಪರ್ಶವು ಅವನ ಕಾವ್ಯ ಶೈಲಿಯಲ್ಲಿದೆ. ಮುಖ್ಯವಾಗಿ ನಯಸೇನನ ಶೈಲಿಯಲ್ಲಿ ದೇಸಿಯ ಪ್ರಾಚುರ್ಯ,ತೊಡಕಿಲ್ಲದ ಪದಮೈತ್ರಿ, ಉತ್ತಮ ಭಾಷಾ ಪ್ರವಾಹ, ನವಿರಾದ ಹಾಸ್ಯ, ನಾಟಕೀಯತೆ ಇವುಗಳನ್ನು ಗಮನಿಸಬಹುದು. ಒಂದು ವಿಷಯನ್ನು ಮನದಟ್ಟು ಮಾಡಿಸಲು ಮಾಲೋಪಮೆಗಳನ್ನೇ ಬಳಸುತ್ತಾನೆ. ಗಾದೆಗಳನ್ನು ಉಚಿತವಾದ ರೀತಿಯಲ್ಲಿ ಬಳಸಿಕೊಂಡಿದ್ದಾನೆ.

### ಕೃತಿಯ ಮಹತ್ವ

ಧರ್ಮಾಮೃತವು ೧೪ ಆಶ್ವಾಸಗಳನ್ನುಳ್ಳ ಚಂಪೂ ಕಾವ್ಯ. ಒಂದೊಂದು ಆಶ್ವಾಸಕ್ಕೆ ಒಂದೊಂದು ಕಥೆ. ಎಲ್ಲ ಕಥೆಗಳೂ ಆಕರ್ಷಕವಾಗಿವೆ. ಸಹಜವಾದ ಧರ್ಮನಿಷ್ಠರ ಕಥೆ, ಉಪದೇಶ, ಬೋಧನೆ ಇತ್ಯಾದಿಗಳಿಂದ ಧರ್ಮಮಾರ್ಗಕ್ಕೆ ಬಂದವರ ಕಥೆ, ಮೂರ್ಖತನದಿಂದ ಅಧೋಗತಿಗಿಳಿದವರ ಕಥೆ ಇವೆಲ್ಲವೂ ಈ ಕಾವ್ಯದಲ್ಲಿವೆ. ಈ ಕಾವ್ಯವು ಒಂದೇ ಕಥೆಯನ್ನು ಕೊನೆಯವರೆಗೂ ಹೇಳದಿರುವುದರಿಂದ, ಒಂದಕ್ಕೊಂದು ಸಂಬಂಧವೂ ಇಲ್ಲದಿರುವುದಿರಂದ ಇದನ್ನು ಪದ್ಯರೂಪದ ಕಥಾಸಂಗ್ರಹ ಎನ್ನಬಹುದು. ನಯಸೇನನ ತಂತ್ರವೂ ವಿಶಿಷ್ಟವಾದುದು. ಮುಖ್ಯವಾಗಿ ಸಾಮಾನ್ಯ ಜನರೂ ಓದಿ ಅರ್ಥಮಾಡಿ ಕೊಳ್ಳಬಹುದಾದ ಕೃತಿಯಾಗಿದೆ. ಪಾಠಾಂತರಗಳೂ, ಹಸ್ತಪ್ರತಿಗಳೂ ಅಧಿಕ ಸಂಖ್ಯೆಯಲ್ಲಿರುವುದು 'ಧರ್ಮಾಮೃತ'ದ ಜನಪ್ರಿಯತೆಗೆ ಸಾಕ್ಷಿಯಾಗಿದೆ.

### 2.4.4 ಕೃತಿ ವಿಮರ್ಶೆ

ದಯಾಮಿತ್ರ ಸೆಟ್ಟಿ ಮತ್ತು ವಸುಭೂತಿಯರನ್ನು ಒಳಗೊಂಡ ದರ್ಶನದ ಕಥೆ ನಯಸೇನನ ಕಥನ ಕಲೆಗೆ ಒಳ್ಳೆಯ ಉದಾಹರಣೆ. ವೈದಿಕ ಮತವನ್ನು ಅತ್ಯಂತ ಸೂಕ್ಷ್ಮವಾಗಿ ವಿಡಂಬನೆ ಮಾಡಿದ್ದಾನೆ.

ಯಾವುದನ್ನೂ ಖಂಡಿಸಿದೆ ಎಚ್ಚರದಿಂದ ಜೈನಮತದ ಮೇಲ್ಮೆಯನ್ನು ತೋರಿಸುತ್ತಾನೆ. ಕಥೆಯೊಳಗೆ ಇನ್ನೊಂದು ಕಥೆಯನ್ನು ಹೇಳುವ ತಂತ್ರವೂ ನಯಸೇನನಿಗೆ ತಿಳಿದಿದೆ. ಅದರಲ್ಲಿಯೂ ಅವನು ಯಶಸ್ವಿಯಾಗಿದ್ದಾನೆ. ಮನುಷ್ಯರ ಆಲೋಚನೆಗಳನ್ನು ಕವಿಯು ಚೆನ್ನಾಗಿ ಗುರುತಿಸುತ್ತಾನೆ. ಹಣದ ಆಸೆಗೆ ಹೇಗೆ ವರ್ತಿಸುತ್ತಾರೆಂಬುದನ್ನು ವಸುಭೂತಿಯ ವರ್ಣನೆಯಲ್ಲಿ ಕಾಣುತ್ತೇವೆ. ವಾರಿಷೇಣ ಹಲವು ವರ್ಷಗಳು ತಪೋನಿರತನಾಗಿದ್ದು ತನ್ನ ಮಿತ್ರನನ್ನು ತಿದ್ದುವುದಕ್ಕಾಗಿ ತಂತ್ರವನ್ನು ಪ್ರಯೋಗಿಸಲು ಮನೆಗೆ ಬಂದಾಗ ಅವನ ತಾಯಿಯೇ ಮಗನ ವೈರಾಗ್ಯವನ್ನು ಸಂದೇಹಿಸುತ್ತಾಳೆ. ಆದರೆ ಅದು ಸಂಚಾರಿ ಭಾವವಾಗಿತ್ತು. ಕೆಲವು ಕಥೆಗಳಲ್ಲಿ ಉತ್ಪ್ರೇಕ್ಷೆಯಿದೆ. ಅತಿದೀರ್ಘವಾದ ವರ್ಣನೆಗಳಿವೆ. ಉಪಮೆಗಳು ಕೆಲವು ಕಡೆ ಮಾಲೆ ಮಾಲೆಯಾಗಿ ಬರುವುದರಿಂದ ನಿರರ್ಗಳವಾದ ಕಥೆಯು ಓಟಕ್ಕೆ ತಡೆ ಒಡ್ಡಿದಂತಾಗುತ್ತದೆ. ಅತಿವೃಷ್ಟಿಯ ಬೇಸರವೂ ಆಗುತ್ತದೆ. ಈ ಅಂಶವನ್ನು ಬಿಟ್ಟರೆ ಧರ್ಮಾಮೃತ ಕೃತಿಯು ಧರ್ಮದ ಅಮೃತವನ್ನು ಎಲ್ಲರಿಗೂ ಕೊಡುತ್ತದೆ.

## 2.5 ನೇಮಿಚಂದ್ರ : ಕಾಲ, ದೇಶ, ಕೃತಿ ವಿಚಾರ

### 2.5.1 ಕಾಲ

ನೇಮಿಚಂದ್ರನು ತನ್ನ ಕಾವ್ಯಗಳಲ್ಲಿ ತನ್ನ ವೈಯಕ್ತಿಕ ವಿಚಾರಗಳನ್ನು ಹೇಳಿಕೊಂಡಿಲ್ಲ. ಈತನು ತನ್ನ ನೇಮಿನಾಥಪುರಾಣದಲ್ಲಿ ವೀರಬಲ್ಲಾಳದೇವನ ಮಹಾಪ್ರಧಾನ ಪದ್ಮನಾಭದೇವನು ಈ ಕೃತಿ ರಚನೆಗೆ ಪ್ರೇರಕನೆಂದು ಹೇಳಿಕೊಂಡಿದ್ದಾನೆ ಮತ್ತು ಲೀಲಾವತಿ ಕಾವ್ಯದಲ್ಲಿ ಲಕ್ಷ್ಮಣರಾಜನನ್ನು ಮತ್ತು ಆತನ ಪತ್ನಿ ಚಂದಲಾದೇವಿಯನ್ನೂ ಸ್ಮರಿಸಿಕೊಂಡಿದ್ದಾನೆ. ಈ ಎರಡೂ ಅಂಶಗಳನ್ನು ಆಧರಿಸಿ ಕವಿಯ ಕಾಲವನ್ನು ಊಹಿಸಬೇಕಾಗಿದೆ. ಕ್ರಿ.ಶ. ೧೧೯೦ಕ್ಕೆ ಮೊದಲು 'ಲೀಲಾವತಿ'ಯನ್ನೂ, ಅನಂತರ ನೇಮಿನಾಥ ಪುರಾಣವನ್ನೂ ನೇಮಿಚಂದ್ರನು ರಚಿಸಿರಬಹುದೆಂದು ತಿಳಿದು ಅವನ ಕಾಲವು ೧೧೯೦ ಎಂದು ಹೇಳಬಹುದು.

### 2.5.2 ದೇಶ

ನೇಮಿಚಂದ್ರನ ಕಾಲವನ್ನು ನಿರ್ಧರಿಸುವ ಸಂದರ್ಭದಲ್ಲಿ ಪರಿಶೀಲಿಸಲಾದ ವಿಷಯಗಳಲ್ಲಿಯೇ ದೇಶದ ವಿಚಾರವೂ ಅಡಗಿದೆ. ಅವನು ಮೊದಲು ರಟ್ಟ ವಂಶದ ಲಕ್ಷ್ಮಣದೇವನ ಆಶ್ರಯಪಡೆದು ಸವದತ್ತಿಯಲ್ಲಿದ್ದನು. ಅನಂತರ ಅವನು ಪದ್ಮನಾಭದೇವನೆಂಬ ಹೊಯ್ಸಳರಾಜನ ಮಂತ್ರಿಯ ಆಶ್ರಯ ಪಡೆದು ದ್ವಾರಸಮುದ್ರದಲ್ಲಿದ್ದನು. (ಹಳೇಬೀಡು)

### 2.5.3 ಕೃತಿಗಳು

ನೇಮಿಚಂದ್ರನು ಪಂಪಾದಿಗಳಂತೆ ಒಂದು ಲೌಕಿಕ ಕಾವ್ಯವನ್ನೂ ಒಂದು ಧಾರ್ಮಿಕ ಕಾವ್ಯವನ್ನೂ ಬರೆದಿದ್ದಾನೆ. 'ಲೀಲಾವತಿ' ಎಂಬ ಹೆಸರಿನ ಕಾವ್ಯವು ಲೌಕಿಕ ಕಾವ್ಯವಾಗಿದೆ. ಇದು ಒಂದು ಕಾಲ್ಪನಿಕ ಕಥಾವಸ್ತುವನ್ನು ಉಳ್ಳ ಶೃಂಗಾರ ರಸ ಪ್ರಧಾನವಾಗಿರುವ ಕೃತಿಯಾಗಿದೆ. ಧಾರ್ಮಿಕ ಕಾವ್ಯವಾದ ನೇಮಿನಾಥ ಪುರಾಣವು ೨೨ನೆಯ ತೀರ್ಥಂಕರನಾದ ನೇಮಿನಾಥನ ಜೀವನ ಚರಿತ್ರೆಯನ್ನು ಒಳಗೊಂಡಿದೆ. ಯಾವ ಕಾರಣದಿಂದಲೋ ಈ ಕಾವ್ಯವು ಅರ್ಧಕ್ಕೆ ನಿಂತು ಹೋಗಿದೆ. ಆದ್ದರಿಂದ ಇದಕ್ಕೆ 'ಅರ್ಧನೇಮಿ' ಎಂಬ ಹೆಸರೂ ಕೂಡ ಬಂದಿದೆ.

#### ಕೃತಿ ಪರಿಚಯ : ಲೀಲಾವತಿ

#### ಆಕರ

ಇದು ಸ್ವತಂತ್ರವಾಗಿ ರಚಿಸಿರುವ ಶೃಂಗಾರ ಪ್ರಧಾನವಾದ ಕಾವ್ಯ. ಸಂಸ್ಕೃತದಲ್ಲಿ ಬಾಣನ ಕಾದಂಬರಿಯ ಸ್ವರೂಪ, ಲಕ್ಷಣಗಳನ್ನು ನೋಡಿ ನೇಮಿಚಂದ್ರನು ಈ ಕಾವ್ಯವನ್ನು ರಚಿಸಿದ್ದಾನೆ.

ಕ್ರಿ.ಸ. ೮೦೦ರಲ್ಲಿದ್ದ ಕುತೂಹಲ ಎಂಬ ಹೆಸರಿನ ಕವಿಯು 'ಲೀಲಾವತಿ' ಹೆಸರಿನ ಪ್ರಾಕೃತ ಭಾಷೆಯ ಕಾವ್ಯವನ್ನು ಬರೆದಿದ್ದಾನೆ. ಅದರಿಂದಲೂ ಕೆಲವು ಪ್ರೇರಣೆಗಳು ಸಿಕ್ಕಿವೆ. ಸುಬಂಧು ಎಂಬ ಕವಿಯು ರಚಿಸಿರುವ 'ವಾಸವ ದತ್ತೆ' ಎಂಬ ಗದ್ಯಕಾವ್ಯವು ಈ ಕಾವ್ಯಕ್ಕೆ ಆಕರವಾಗಿರುವಂತೆ ಕೋರುತ್ತದೆ. ಆದರೆ ಸಂಪೂರ್ಣವಾಗಿ ವಾಸವದತ್ತೆಯನ್ನೇ ಅವಲಂಬಿಸಿಲ್ಲ ಧನಪಾಲನ 'ತಿಲಕಮಂಜರಿ' ಮುಂತಾದ ಕಡೆಗಳಿಂದ ಹಲವು ಅಂಶಗಳನ್ನು ತೆಗೆದುಕೊಂಡಿದ್ದಾನೆ ಎನ್ನಬಹುದು.

## ಕಥಾವಸ್ತು

ಲೀಲಾವತಿ ಕಾವ್ಯದ ವಸ್ತು ಶೃಂಗಾರ ಪ್ರಧಾನವಾದ ಕಾಲ್ಪನಿಕ ಕಥೆ. ಲೀಲಾವತಿಯು ಈ ಕಾವ್ಯದ ನಾಯಕಿ, ಕುಸುಮಪುರದ ರಾಜನಾದ ಶೃಂಗಾರಶೇಖರ ಮತ್ತು ರಾಣಿ ವಿಭ್ರಮರೇಖೆ ಇವರ ಏಕೈಕ ಪುತ್ರಿ ಅಸಾಧಾರಣ ಸುಂದರಿ. ಅವಳು ಬೆಳೆದು ತರುಣಿಯಾದಾಗ ರಾಜನು ಅವಳ ಸ್ವಯಂವರವನ್ನು ಏರ್ಪಡಿಸಿದನು. ಆದರೆ ಅವಳ ಯಾರ ಕೊರಳಿಗೂ ಹೂಮಾಲೆಯನ್ನು ಹಾಕಲಿಲ್ಲ. ಒಂದು ರಾತ್ರಿ ಕನಸಿನಲ್ಲಿ ಒಬ್ಬ ಸುಂದರಾಕಾರನಾದ ತರುಣನನ್ನು ಕಂಡು ಅವನಿಗೆ ಮನ ಸೋತು, ಅವನ ಚಿತ್ರವನ್ನು ಬರೆದು ತೋರಿಸುತ್ತಾಳೆ. ಈ ಚಿತ್ರದಲ್ಲಿರುವವನು ನಿಜವಾಗಿಯೂ ಬದುಕಿದ್ದ ತರುಣನೇ. ಅವನು ಜಯಂತೀಪುರದ ರಾಜ ಚೂಡಮಣಿ ಮತ್ತು ರಾಣಿ ಪದ್ಮಾವತಿ ಇವರ ಪುತ್ರ. ಹೆಸರು ಕಂದರ್ಪದೇವ. ಹೆಸರಿಗೆ ತಕ್ಕಂತೆ ಮನ್ಮಥನಂತೆಯೇ ಇದ್ದವನು. ಅವನ ಕನಸಿನಲ್ಲಿಯೂ ಕೂಡ ಲೀಲಾವತಿಯು ಕಾಣಿಸಿಕೊಂಡಿದ್ದುದರಿಂದ, ಅವಳ ಚಿಂತೆಯಲ್ಲಿಯೇ ಮುಳುಗಿಹೋಗಿದ್ದನು. ಅವಳನ್ನು ಹುಡುಕಲು ನಿರ್ಧರಿಸಿ ಒಬ್ಬ ಗೆಳೆಯನೊಡನೆ ಪ್ರಯಾಣವನ್ನು ಪ್ರಾರಂಭಿಸುತ್ತಾನೆ. ಕಂದರ್ಪದೇವ ಮತ್ತು ಲೀಲಾವತಿ ಇಬ್ಬರೂ ವಿರಹತಾಪದಿಂದ ಬಳಲುತ್ತಿರುತ್ತಾರೆ. ಕಂದರ್ಪದೇವನಿಗೆ ವಿರಹತಾಪವು ಅಧಿಕವಾಗಿ ಮೂರ್ಛೆಹೋಗುತ್ತಾನೆ. ವಿದ್ಯಾಧರಿಯರಿಬ್ಬರು ತಮ್ಮ ವಿದ್ಯಾಶಕ್ತಿಯಿಂದ ಅವನನ್ನು ಎತ್ತಿಕೊಂಡುಹೋಗಿ ಲೀಲಾವತಿಯ ಪಕ್ಕದಲ್ಲಿ ಮಲಗಿಸುತ್ತಾರೆ. ಇಬ್ಬರೂ ಎಚ್ಚತ್ತು ಪರಸ್ಪರ ಆಶ್ಚರ್ಯೋದ್ವೇಗದಿಂದ ಹಾರಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ವಿದ್ಯಾಧರಿಯರು ಕಂದರ್ಪದೇವನನ್ನು ಮೊದಲು ಇದ್ದ ಕಡೆಗೇ ತಂದು ಇರಿಸಿ ಹೊರಟುಹೋಗುತ್ತಾರೆ.

ಕಂದರ್ಪದೇವನು ಮೂರ್ಛೆಯಿಂದ ಎದ್ದವನಂತೆ ಎದ್ದು ಇನ್ನೂ ಹೆಚ್ಚು ವಿರಹಕ್ಕೆ ಗುರಿಯಾಗಿ ದೈವ ಪ್ರೇರಣೆಯಂತೆ ದಾರಿ ಹಿಡಿದು ನಡೆದು ಕುಸುಮಪುರಕ್ಕೇ ಬರುತ್ತಾರೆ. ಲೀಲಾವತಿಯ ಸಖಿಯರು ಅವರಿಬ್ಬರಿಗೂ ಗಾಂಧರ್ವ ವಿವಾಹವನ್ನು ನೆರವೇರಿಸುತ್ತಾರೆ. ಒಂದು ದಿನ ಕಂದರ್ಪದೇವನ ಮಿತ್ರನು ಲೀಲಾವತಿಯ ಚಿತ್ರವನ್ನು ತಂದುಕೊಟ್ಟಾಗ ಅದನ್ನು ನೋಡಿ ಹಿಂದಿರುಗಿಸಿ ಬಿಡುತ್ತಾನೆ. ಲೀಲಾವತಿಗೆ ಸಂಶಯ ಬಂದು ಸಖಿಯರೊಡನೆ ಲತೆಯಾಗಿ ಬಿಡುತ್ತಾಳೆ. ಕಂದರ್ಪದೇವನು ಅವಳ ಚಿಂತೆಯಲ್ಲಿಯೇ ಅಲೆಯುತ್ತಾ ಅದೇ ಲತೆಯನ್ನು ಅಪ್ಪಿಕೊಳ್ಳುತ್ತಾನೆ. ಆ ಲತೆಯು ಲೀಲಾವತಿಯಾಗಿ ಬಿಡುತ್ತದೆ. ಅವಳ ಸ್ಪರ್ಶದಿಂದ ಸಖಿಯರೂ ಜೀವ ತಾಳುತ್ತಾರೆ. ಅವರು ಮತ್ತೆ ಮೊದಲಿನಂತೆ ಕಾಮಪ್ರೇಮಗಳಿಂದ ವಿಹರಿಸುತ್ತಾ ಇರುತ್ತಾರೆ. ಕಂದರ್ಪದೇವನ ರೂಪಿಗೆ ಮರುಳಾದ ಒಬ್ಬ ವಿದ್ಯಾಧರಿಯು ಅವನ ಸಂಗವನ್ನು ಬಯಸಿ ತಿರಸ್ಕೃತಳಾಗಿ ಕೋಪದಿದ ಅವನ್ನು ಮರವನ್ನಾಗಿ ಮಾಡಿ ಬಿಡುತ್ತಾಳೆ. ಲೀಲಾವತಿಯು ಅವನನ್ನು ಎಲ್ಲಿಯೂ ಕಾಣದೆ ಪ್ರಾಣತ್ಯಾಗ ಮಾಡಲು ನಿರ್ಧರಿಸಿ ಅದೇ ಮರಕ್ಕೆ 'ದೇಹದ'ವನ್ನು ಮಾಡಿ ನಂತರ ಸಾಯಲು ಆಲೋಚಿಸುತ್ತಾಳೆ. ಅವಳು ಆ ಮರವನ್ನು ಸ್ಪರ್ಶಿಸಿದಾಗ ಕಂದರ್ಪದೇವನು ಕಾಣಿಸಿ ಕೊಳ್ಳುತ್ತಾನೆ.

ಚೂಡಾಮಣಿ ರಾಜ ಮತ್ತು ಪದ್ಮಾವತಿ ಇಬ್ಬರೂ ಮಗನನ್ನು ಹುಡುಕಿಕೊಂಡು ಕುಸುಮಪುರಕ್ಕೆ ಬರುತ್ತಾರೆ. ರಾಜ ಶೃಂಗಾರಶೇಖರ ಮತ್ತು ವಿಭ್ರಮ ಲೇಖೆ ಇಬ್ಬರೂ ಸಂಭ್ರಮದಿಂದ ಅವರನ್ನು ಸ್ವಾಗತಿಸಿ ಮಗಳ ಜೊತೆ ಇದ್ದ ಕಂದರ್ಪದೇವನನ್ನು ಸನ್ಮಾನಿಸುತ್ತಾರೆ. ನವದಂಪತಿಗಳು ಜಯಂತೀಪುರಕ್ಕೆ ಪ್ರಯಾಣ ಕೈಗೊಳ್ಳುತ್ತಾರೆ.

## ಕೃತಿ ಪರಿಚಯ : ನೇಮಿನಾಥಪುರಾಣ

### ಆಕರ

ಈ ಕಾವ್ಯಕ್ಕೆ ಗುಣಭದ್ರಾಚಾರ್ಯರ ಉತ್ತರ ಪುರಾಣವೇ ಆಕರ. ಅದರಲ್ಲಿ ಹರಿವಂಶ ಪುರಾಣಕ್ಕೆ ಸಂಬಂಧಿಸಿದ ಭಾಗವು ಸುಮಾರು ೧೫೫೦ ಶ್ಲೋಕಗಳಿಂದ ಕೂಡಿದೆ. ನೇಮಿನಾಥ ಪುರಾಣದಲ್ಲಿ ಜೈನ ಸಂಪ್ರದಾಯದ ಮಹಾಭಾರತ ಕಥೆಯು ಸೇರಿದೆ. ಕವಿಯು ಮೊದಲು ಜಿನ ಕತೆಯನ್ನು ಹೇಳುತ್ತಾನೆ. ನೇಮಿನಾಥ ತೀರ್ಥಂಕರನ ೯ ಪೂರ್ವಜನ್ಮಗಳನ್ನು ಕವಿಯು ವರ್ಣಿಸಿದ್ದಾನೆ. ವಿಂಧ್ಯಕ ಇಭ್ಯಕೇತು, ಸೌಧರ್ಮೇದ್ರ, ಚಿಂತಾಗತಿ, ಮಹೇಂದ್ರ, ಅಪರಾಜಿತ, ಅಚ್ಯುತೇಂದ್ರ, ಸುಪ್ರತಿಷ್ಠ, ಅಹಮಿಂದ್ರ ಎಂಬಿವೇ ಆ ಒಂಬತ್ತು ಜನ್ಮಗಳು. ಭೂಮಿ ಮತ್ತು ಸ್ವರ್ಗಗಳಲ್ಲಿ ಪರ್ಯಾಯವಾಗಿ ಜನ್ಮವೆತ್ತುತ್ತಾ ತೀರ್ಥಂಕರನಾಗಲಿರುವ ಜೀವವು ಭೋಗವಿಮುಖವಾಗುತ್ತಾ ಸಾಗುತ್ತದೆ. ಆಕರ ಗ್ರಂಥದಲ್ಲಿ ಯಾವ ಕ್ರಮದಲ್ಲಿ ಈ ಜನ್ಮಗಳ ವರ್ಣನೆ ಬಂದಿದೆಯೋ ಅದೇ ಕ್ರಮವನ್ನು ಕವಿಯು ಅನುಸರಿಸಿದ್ದಾನೆ. ಆರನೆಯ ಜನ್ಮವಾದ ಅಪರಾಜಿತನಿಂದ ಕಥೆಯು ಪ್ರಾರಂಭವಾಗುತ್ತದೆ. ಅನಂತರ ಇನ್ನೂ ಹಿಂದಕ್ಕೆ ಹೋಗಿ ವಿಂಧ್ಯಕ ಎಂಬ ಬೇಡರ ಒಡೆಯನಿಂದ ಪ್ರಾರಂಭವಾಗುತ್ತದೆ. ಅವನು ಹಾವು ಕಡಿದು ಸತ್ತು ಇಭ್ಯಕೇತುವಾಗಿ ಹುಟ್ಟುತ್ತಾನೆ. ಇಭ್ಯಕೇತು ತಪಸ್ಸು ಮಾಡಿ ಸತ್ತು ಸೌಧರ್ಮೇಂದ್ರನಾಗಿ ಹುಟ್ಟುತ್ತಾನೆ. ಸೌಧರ್ಮೇಂದ್ರನು ಆಯುಸ್ಸು ಮುಗಿದ ಬಳಿಕ ಚಿಂತಾಗತಿಯಾಗಿ ಹುಟ್ಟುತ್ತಾನೆ. ಈ ಚಿಂತಾಗತಿಯು ಜಿನದೀಕ್ಷೆಗೊಂಡು ಸಮಾಧಿ ಮರಣವನ್ನು ಹೊಂದಿ ಮಹೇಂದ್ರನಾಗಿ ಸ್ವರ್ಗದಲ್ಲಿ ಜನ್ಮ ತಾಳುತ್ತಾನೆ. ಮಹೇಂದ್ರನು ಆಯುಷ್ಯವು ತೀರಿದಾಗ ಸತ್ತು ಅಪರಾಜಿತನಾಗಿ ಹುಟ್ಟುತ್ತಾನೆ (ಈ ಜನ್ಮಗಳ ವಿಚಾರವನ್ನು ಚಾರಣ ಮುನಿಗಳು ಅಪರಾಜಿತನಿಗೆ ಹೇಳುವ ಹಾಗೆ ಪುರಾಣಕಾರರು ಬರೆದಿದ್ದಾರೆ) ಅಪರಾಜಿತನು ೨೨ ದಿನಗಳವರೆಗೆ ಉಪವಾಸ ಮಾಡಿ ಮರಣಹೊಂದಿ ಅಚ್ಯುತೇಂದ್ರನಾಗಿ ಸ್ವರ್ಗದಲ್ಲಿ ಹುಟ್ಟುತ್ತಾನೆ. ಆದರೆ ಸ್ವರ್ಗದ ಜೀವನವೇನೂ ಶಾಶ್ವತವಲ್ಲ. ಆಯುಷ್ಯಾಂತ್ಯದಲ್ಲಿ ಅವನು ಸತ್ತು ಭೂಮಿಯಲ್ಲಿ ಸುಪ್ರತಿಷ್ಠ ಹೆಸರಿನ ರಾಜಕುಮಾರನಾಗಿ ಹುಟ್ಟುತ್ತಾನೆ. ಸುಪ್ರತಿಷ್ಠನು ಉಲ್ಕಾಪಾತವನ್ನು ಕಂಡು ವೈರಾಗ್ಯವನ್ನು ಹೊಂದಿ ದೀಕ್ಷೆಗೊಂಡು ಮರಣಹೊಂದಿ ಅಹಮಿಂದ್ರನಾಗುತ್ತಾನೆ. ಈ ಜೀವವು ತನ್ನ ಆಯಸ್ಸು ಮುಗಿದ ಬಳಿಕ ಭೂಮಿಯಲ್ಲಿ ಸಮುದ್ರವಿಜಯ ರಾಜನ ಮಗನಾಗಿ ಹುಟ್ಟುತ್ತಾನೆ. ಈತನೇ ನೇಮಿನಾಥ, ಮುಂದೆ ತೀರ್ಥಂಕರನಾಗಿರುವವನು.

ಕವಿಯು ಸಮುದ್ರವಿಜಯ ರಾಜನಿಗೆ ಸಂಬಂಧಿಸಿದ ಹರಿವಂಶದ ಕಥೆಯನ್ನು ಇನ್ನೂ ಮುಂದೆ ವರ್ಣಿಸುತ್ತಾನೆ. ಇದೇ ಬೇರೆ ದಿಕ್ಕನ್ನು ಹಿಡಿದು ಹರಿಯುತ್ತದೆ. ಜೈನ ಮಹಾಭಾರತವೆಂದು ಹೇಳುವ ಈ ಕಥೆಯನ್ನು ಹೇಳಲು ಹೊರಟ ಕವಿಯು ಕಂಸನ ವಧೆಯಾಗುವವರೆಗೆ ಮಾತ್ರ ಬರೆದಿದ್ದಾನೆ. ಬಹುಶಃ ಆ ವೇಳೆಗೆ ಕವಿಯು ಮರಣಹೊಂದಿರಬಹುದೆಂದು ಕಾಣುತ್ತದೆ.

## ಪಾತ್ರಪರಿಚಯ

### ಅ) ಅಪರಾಜಿತ

ಈತನು ಸಿಂಹಪುರ ಪಟ್ಟಣದ ರಾಜದಂಪತಿಗಳಾದ ಅರ್ಹದ್ದಾಸ ಮತ್ತು ಜಿನದತ್ತೆಯರ ಮಗ. ಬಾಲ್ಯ, ಕೌಮಾರ್ಯಗಳನ್ನು ಕಳೆದು ತಾರುಣ್ಯಾವಸ್ಥೆಗೆ ಬಂದಾಗ ಅವನಿಗೆ ಪ್ರೀತಿಮತಿ ಎಂಬ ಕನ್ಯೆಯನ್ನು ತಂದು ವಿವಾಹ ಮಾಡುತ್ತಾರೆ. ಅಪರಾಜಿತನು ಯುವರಾಜನಾಗಿರುವಾಗ ವಿಮಲವಾಹನ ತೀರ್ಥಂಕರರ ಉಪದೇಶವನ್ನು ಕೇಳಿದ ಅರ್ಹದ್ದಾಸನು ವೈರಾಗ್ಯದಿಂದ ತಪಸ್ಸಿಗೆ ಹೋದ ಬಳಿಕ ಅಪರಾಜಿತನೇ ಮಹಾರಾಜನಾಗುತ್ತಾನೆ. ಚಾರಣಮುನಿಗಳಿಂದ ತನ್ನ ಪೂರ್ವಜನ್ಮಗಳ ವೃತ್ತಾಂತವನ್ನು ತಿಳಿದುಕೊಳ್ಳುತ್ತಾನೆ. ಅವನ ಆಯುಸ್ಸು ಒಂದು ತಿಂಗಳು ಮಾತ್ರ ಉಳಿದಿದೆ ಎಂಬುದನ್ನೂ ಅವರಿಂದಲೇ ತಿಳಿದುಕೊಳ್ಳುತ್ತಾನೆ. ಅನಂತರ ಅವನು 'ಪ್ರಾಯೋಪಯೋಗ' ಸಮಾಧಿ ಮರಣವನ್ನು ಹೊಂದುತ್ತಾನೆ. ಈ ಕಾವ್ಯವು ಪ್ರಾರಂಭವಾಗುವುದು ಅಪರಾಜಿತನ ವಿಷಯದಿಂದಲೇ ಅನಂತರ ಇತರ ಜನ್ಮಗಳ ಕಡೆಗೆ ಕಥೆಯು ಸರಿಯುತ್ತದೆ.

**ಆ) ಚಿಂತಾಗತಿ**

ಸೂರ್ಯಪ್ರಭ ಮತ್ತು ಧಾರಿಣಿದೇವಿಯರ ಪುತ್ರನಾದ ಈತನು ಇಬ್ಬರು ತಮ್ಮಂದಿರಿಗಾಗಿ ಒಂದು ಸ್ವಯಂವರಕ್ಕೆ ಹೋಗುತ್ತಾನೆ. ವಿಳಾಸವತಿ ಎಂಬ ರಾಜಕುಮಾರಿಯು ರೂಪದಗರ್ವದಿಂದ ಲೋಕವನ್ನು ಧಿಕ್ಕರಿಸಿ ನಡೆದುಕೊಳ್ಳುತ್ತಿದ್ದಳು. ಅವಳು ವಿದ್ಯಾಧರ ವಂಶದವಳಾದುದರಿಂದ ಇನ್ನೂ ಹೆಚ್ಚು ಅಹಂಕಾರ ಮೂಡಿತ್ತು. ರೂಪ, ವಿದ್ಯೆ ಮತ್ತು ವಯಸ್ಸು ಇವುಗಳ ಗರ್ವದಿಂದಾಗಿ ಸೂರ್ಯನನ್ನು ಲೆಕ್ಕಿಸದೆ ಆಕಾಶದಲ್ಲಿ ಚರಿಸುತ್ತಿದ್ದಳು. ಅವಳ ಸ್ವಯಂವರವು ಏರ್ಪಾಡಾದಾಗ ವಿದ್ಯಾಧರ ಯುವಕರು ಸಂಭ್ರಮದಿಂದ ಆಗಮಿಸಿದರು. ಚಿಂತಾಗತಿಯೂ ತನ್ನ ತಮ್ಮಂದಿರೊಡನೆ ಅಲ್ಲಿಗೆ ಬಂದನು. ಸ್ವಯಂವರದ ನಿಬಂಧನೆ ಏನೆಂದರೆ ಯಾರು ಮೇರುಗಿರಿಗೆ ಹಾರಿ ಅಲ್ಲಿರುವ ಪಾಂಡುಕವನಕ್ಕೆ ಪ್ರದಕ್ಷಿಣೆ ಹಾಕಿ ಜಿನ ಪ್ರತಿಮೆಯನ್ನು ಪೂಜಿಸಿ ಅಲ್ಲಿ ಮೊದಲೇ ಇರುವ ಮಂದಾರ ಹೂಮಾಲೆಯನ್ನು ತೆಗೆದುಕೊಂಡು ಮೊದಲು ಬರುವರೋ ಅವರನ್ನು ವಿಳಾಸವತಿ ವರಿಸುತ್ತಾಳೆ ಎನ್ನುವುದು. ಚಿಂತಾಗತಿ ಸ್ಪರ್ಧೆಯಲ್ಲಿ ಗೆದ್ದು ನಿಂತಾಗ ಅವಳು ಮಾಲೆ ಹಾಕಲು ಸಿದ್ಧಳಾದಳು. ಚಿಂತಾಗತಿ ಒಪ್ಪದೆ ತಮ್ಮಂದಿರಲ್ಲಿ ಯಾರನ್ನಾದರೂ ವರಿಸುವಂತೆ ಹೇಳಿದನು. ವಿಳಾಸವತಿ ಅತಿಯಾಗಿನೊಂದು, ಚಿಂತಿಸಿ, ವಿರಕ್ತಳಾಗಿ ತಪಸ್ಸಿಗೆ ಸಿದ್ಧಳಾದಳು. ಅವಳ ನಿರ್ಧಾರವನ್ನು ನೋಡಿದ ಚಿಂತಾಗತಿಯು ತೀವ್ರವಾದ ವ್ಯಥೆಗೆ ಗುರಿಯಾದನು. ಎಷ್ಟಾದರೂ ಅವನು ಮುಂದೆ ತೀರ್ಥಂಕರನಾಗಲಿರುವ ಜೀವ. ಅವನಿಗೂ ವೈರಾಗ್ಯವು ಮೂಡಿ ಅವಳಂತೆಯೇ ತಪಸ್ಸು ಮಾಡಲು ನಿರ್ಧರಿಸುತ್ತಾನೆ. ಮುಖ್ಯವಾಗಿ ಭವ್ಯಜೀವವಾದ ಚಿಂತಾಗತಿ ತೋರಿಕೆಗೆ ಎಲ್ಲ ರಾಜಕುಮಾರರಂತೆ ಕಂಡರೂ, ಸಮಯ ಬಂದಾಗ ಸಂಸ್ಕಾರದ ಪ್ರಭಾವವು ಪ್ರಕಟವಾಗುತ್ತದೆ ಎನ್ನುವುದನ್ನು ಇಲ್ಲಿ ನೋಡಬಹುದು.

**ಇ) ವಿಂಧ್ಯಕ**

ತೀರ್ಥಂಕರವಾಗಲಿರುವ ಜೀವದ ಕಡೆಯ ಹತ್ತು ಜನ್ಮಗಳಲ್ಲಿ ಕವಿಯು ವರ್ಣಿಸಲು ತೆಗೆದುಕೊಂಡ ಮೊದಲ ಜನ್ಮವೇ ವಿಂಧ್ಯಕನದು. ಕಾವ್ಯ ಪ್ರಾರಂಭವಾಗುವುದು ವಿಂಧ್ಯಕನ ಚರಿತ್ರೆಯಿಂದ ಅಲ್ಲ.

ವಿಂಧ್ಯಕನು ಒಬ್ಬ ವ್ಯಾಧಪ್ರಮುಖ. ಒಮ್ಮೆ ದೂರದಲ್ಲಿ ಕಲ್ಲಿನಂತೆ ನಿಂತಿದ್ದ ಜೈನಮುನಿಗಳನ್ನು ಬಾಣದಿಂದ ಹೊಡೆಯಲು ಸಿದ್ಧನಾದಾಗ ಅವನ ಪತ್ನಿಯು ಅವನನ್ನು ತಡೆದು ಮುನಿಗಳ ಮಹತ್ವವನ್ನು ತಿಳಿಸುತ್ತಾಳೆ. ಅವನು ಮುನಿಗಳ ಬಳಿಗೆ ಬಂದು ಪಾದಗಳಿಗೆ ವಂದಿಸುತ್ತಾನೆ. ಅವರು ಅವನಿಗೆ ಅಣುವ್ರತಗಳನ್ನು ಉಪದೇಶಿಸುತ್ತಾರೆ. ಅಲ್ಲಿಂದ ಮುಂದೆ ಪತಿ ಪತ್ನಿಯರು ಸಸ್ಯಾಹಾರಿಗಳಾಗಿ ಜಿನಪಾದಪದ್ಮಗಳನ್ನು ಸ್ಮರಿಸಲು ಕಾಲ ಕಳೆಯುತ್ತಾರೆ. ಪ್ರಾಣಿಹತ್ಯೆ ಮಾಡದೆ ಮಾಂಸಾಹಾರದ ಚಪಲವನ್ನು ತಡೆದುಕೊಂಡು ಬದುಕುತ್ತಾರೆ. ಮುಂದೆ ತೀರ್ಥಂಕರನಾಗಲಿರುವ ಜೀವದ ದೃಢ ಚಿತ್ತ ಈಗಲೇ ಪ್ರಕಟವಾಗುತ್ತಿರುವುದನ್ನು ಇಲ್ಲಿ ಕಾಣಬಹುದು. ಹಣ್ಣುಗಳನ್ನು ಹುಡುಕುವ ಸಂದರ್ಭದಲ್ಲಿ ಹಾವು ಕಚ್ಚಿ ವಿಂಧ್ಯಕ ಮರಣ ಹೊಂದುತ್ತಾನೆ.

## ಸನ್ನಿವೇಶ ನಿರ್ಮಾಣ

**ಅ) ದೇವಕಿಯ ಪ್ರಕರಣ**

ಜೈನ ಪುರಾಣ ಕಾವ್ಯಗಳಲ್ಲಿ ವೈದಿಕ ಸಂಪ್ರದಾಯದ ಕಥೆಗಳು ಬೇರೆ ರೀತಿಯಲ್ಲಿ ನಿರೂಪಿತ ವಾಗಿರುತ್ತವೆ. ಅಂತಹ ಸಂಗತಿಗಳಲ್ಲಿ ವಸುದೇವ ದೇವಕಿಯರ ಪ್ರಸಂಗವು ಒಂದು. ದೇವಕಿಯು ಕಂಸನ ಚಿಕ್ಕಪ್ಪನ ಮಗಳು. (ಅಂದರೆ ತಂಗಿಯೇ ಆಗುತ್ತಾಳೆ). ಕಂಸನೇ ವಸುದೇವನಿಗೆ ವಿವಾಹ ಮಾಡಿಸುತ್ತಾನೆ. ವಸುದೇವ ಸಮುದ್ರ ವಿಜಯ ರಾಜನ ತಮ್ಮ. ದೇವಕಿಯು ಒಮ್ಮೆ ತನ್ನ 'ಮುಟ್ಟಿನ ಬಟ್ಟೆ'ಯನ್ನು ಒಂದು ಕಡೆ ಇಟ್ಟಿದ್ದಾಗ ಕಂಸನ ಪತ್ನಿ ಜೀವಂಜಸೆಯು ಅದನ್ನು ತಂದು ಒಬ್ಬ ಜೈನಮುನಿಗೆ ತೋರಿಸಿ

ಪರಿಹಾಸ ಮಾಡುತ್ತಾಳೆ. ಮುನಿಯು ಕೋಪಗೊಂಡು 'ಈ ಬಟ್ಟೆಯು ಯಾರದೋ ಅವಳ ಮಗನಿಂದಲೇ ನಿನ್ನ ಗಂಡ ಸಾಯುತ್ತಾನೆ' ಎಂದು ಶಾಪಕೊಡುತ್ತಾನೆ. ವಸುದೇವ ದೇವಕಿಯರು ಆ ಮುನಿಯನ್ನು ಕರೆದು ಆಹಾರದಾನ ಮಾಡಿದಾಗ ಅವನು 'ನಿಮಗೆ ಒಟ್ಟು ಎಂಟು ಜನ ಮಕ್ಕಳಾಗುತ್ತಾರೆ. ಅವರೆಲ್ಲರೂ ಬೇರೆಯವರ ಮನೆಗಳಲ್ಲಿ ಬೆಳೆಯುತ್ತಾರೆ. ಏಳು ಜನರು ತಪಸ್ಸು ಮಾಡಿ ಮೋಕ್ಷವನ್ನು ಪಡೆಯುತ್ತಾರೆ. ಎಂಟನೆಯವನು ತ್ರಿಖಂಡಕ್ಕೆ ಅಧಿಪತಿಯಾಗುತ್ತಾನೆ' ಎಂದು ಹೇಳುತ್ತಾರೆ. ದೇವಕಿಗೆ ಮೂರು ಸಲ ಅವಳಿ ಜವಳಿ ಮಕ್ಕಳಾಗುತ್ತಾರೆ. ಇಂದ್ರನೇ ಅವುಗಳನ್ನು ಬೇರೆ ಕಡೆ ಕಳುಹಿಸಿ ಆ ಜಾಗದಲ್ಲಿ ಸತ್ತ ಮಕ್ಕಳ ಶರೀರಗಳನ್ನು ಇಡುತ್ತಾನೆ. ಏಳನೆಯ ಸಲ ಹುಟ್ಟಿದ ಕೂಸನ್ನು ವಸುದೇವನು ನಂದಗೋಪನಿಗೆ ಕೊಟ್ಟು ಅವನಿಂದ ಹೆಣ್ಣು ಮಗುವನ್ನು ತೆಗೆದುಕೊಂಡು ಬರುತ್ತಾನೆ. ಕಂಸನು ಅದರ ಮೂಗು ಕೊಯ್ದು ವಿಕಾರಗೊಳಿಸುತ್ತಾನೆ. ದೇವಕಿಯ ಗರ್ಭದಿಂದ ಸ್ಥಳಾಂತರವಾದ ಬಲರಾಮನ ವಿಷಯವು ಇಲ್ಲಿ ಬರುವುದಿಲ್ಲ. ಬಲರಾಮನು ರೋಹಿಣಿಯ ಮಗನಾಗಿ ಹುಟ್ಟಿ ಬೆಳೆಯುತ್ತಾನೆ. ಕೃಷ್ಣ ಹುಟ್ಟುವ ಮೊದಲೇ ದೊಡ್ಡವನಾಗಿರುತ್ತಾನೆ. ದೇವಕಿಗೆ ನಾಲ್ಕು ಸಲ ಪ್ರಸವವಾದುದನ್ನು ಕವಿಯು ತಿಳಿಸುತ್ತಾನೆ. ಸಂಖ್ಯೆ ಬಗ್ಗೆ ಯಾವುದೂ ಸ್ಪಷ್ಟವಾಗುವುದಿಲ್ಲ. ದೇವಕಿ ವಸುದೇವರು ಸೆರೆಮನೆಯಲ್ಲಿರುವುದಿಲ್ಲ. ಅವರು ಕಂಸನ ಮನೆಯಲ್ಲಿಯೇ ಇರುತ್ತಾರೆ.

### ಆ) ಚಾಣೂರನ ವಧೆಯ ಪ್ರಸಂಗ

ನೇಮಿಚಂದ್ರನು ಹಿಂದಿನ ನೇಮಿನಾಥ ಪುರಾಣಗಳಲ್ಲಿ ಇಲ್ಲದ ಒಂದು ಸಂಗತಿಯನ್ನು ತಂದಿದ್ದಾನೆ. ಕೃಷ್ಣನು ಚಾಣೂರ ಮಲ್ಲನ ಮೇಲೆ ಕುಸ್ತಿಮಾಡಿ ಸಾಯಲಿ ಎಂದು ಕಂಸನು ಉಪಾಯವನ್ನು ಹೂಡುತ್ತಾನೆ. ವಿಚಾರವನ್ನು ಕೃಷ್ಣನಿಗೆ ತಿಳಿಸಲು ಸೇವಕನು ಬಂದಾಗ ಅವನು ಇರುವುದಿಲ್ಲ. ಸೇವಕನು ವಿಷಯವನ್ನು ಯಶೋಧೆಗೆ ತಿಳಿಸುತ್ತಾನೆ. ಯಶೋಧೆಯು ನಗುತ್ತಾ ಸಿಂಹಕ್ಕೆ ಆನೆಯು ಎದುರಾಗ ಬಲ್ಲುದೆ, ಯಮನಿಗೂ ಕೂಡ ಕೃಷ್ಣನನ್ನು ಕೊಲ್ಲುವುದು ಸಾಧ್ಯವಿಲ್ಲ. ಅವನು ನೀರಿನಲ್ಲಿ ಬೆಂಕಿಯಲ್ಲಿ ಸಾಯುವುದಿಲ್ಲ ಎಂದು ಹೇಳುತ್ತಾಳೆ. ಕೃಷ್ಣನು ತನ್ನ ಗೆಳೆಯರೊಡನೆ ಮಲ್ಲಯುದ್ಧ ನಡೆವ ಜಾಗಕ್ಕೆ ಹೋಗಲು ಹೊರಡುತ್ತಾನೆ. ಕವಿಗೆ ಉಪಕಥೆಗಳು, ವರ್ಣನೆಗಳು ತುಂಬಾ ಇಷ್ಟವಾದ ವಿಷಯಗಳು. ಆದ್ದರಿಂದ ಕೃಷ್ಣ ಮತ್ತು ಗೆಳೆಯರು ಒಬ್ಬ ಅಗಸನೊಡನೆ ವಾದವಿವಾದ ಮಾಡಿ ಅವನ ಕೈಮುರಿದು ಹಾಕುತ್ತಾರೆ. ಇದು ಎಷ್ಟರ ಮಟ್ಟಿಗೆ ಸರಿಯೋ ತಿಳಿಯದು. ಏನೂ ತಪ್ಪು ಮಾಡದ ಅಗಸನೊಡನೆ ವಾದವಿವಾದ ಮಾಡಿ ಅವನ ಕೈಮುರಿದು ಹಾಕಿದ ಕೃಷ್ಣನಿಗೆ ಅದು ವಿನೋದವೆನ್ನಿಸಿದೆ. ಕೃಷ್ಣ ಅಖಾಡಕ್ಕೆ ಬಂದು ನಿಂತ. ಚಾಣೂರನಾದರೋ ಪರಭಯಂಕರ. ಅವನ ದೈತ್ಯಗಾತ್ರಕ್ಕೆ ಜನ ಬೆಚ್ಚಿ ಬೀಳುತ್ತಿದ್ದರು. ಅಂಥವನ ಮುಂದೆ ಕೃಷ್ಣ ಏನೇನೂ ಅಲ್ಲ. ಆದರೆ ಒಂದು ಕೊಡಲಿ ಬೃಹತ್ ದಿಮ್ಮಿಯನ್ನೇ ಸೀಳುವುದಿಲ್ಲವೆ. ಕೃಷ್ಣನ ಕೈಗೆ ಸಿಕ್ಕಿದ ಚಾಣೂರ ಚರ್ಮದ ಬೊಂಬೆಯಂತಾದ. ಸಾವು ಅನಿವಾರ್ಯವಾಯಿತು. ಕೃಷ್ಣ ಕಂಸನನ್ನು ಒಂದೇ ಕೈಯಲ್ಲಿ ಹಿಡಿದೆತ್ತಿ ಬಡಿದು ಕೊಂದು ಹಾಕಿದ.

### ಇ) ಕರ್ಣನ ಜನ್ಮ ಸಂಗತಿ

ಸಂಸ್ಕೃತ ಮಹಾಭಾರತದ ಕಥೆಯಲ್ಲಿ ಬರುವ ಕರ್ಣನ ಜನ್ಮ ವೃತ್ತಾಂತ ಇಲ್ಲಿ ಹೇಗೆ ಬಂದಿದೆ ಎಂಬುದನ್ನು ನೋಡಿ.

ಕುರುವಂಶದ ಪರಾಶರನ ಮಗ ವ್ಯಾಸ. ವ್ಯಾಸನ ಮಕ್ಕಳು ಧೃತರಾಷ್ಟ್ರ, ಪಾಂಡು ಮತ್ತು ಕುಂತಿ, ಮಾದ್ರಿಯರು ಅಂಧಕ ವೃಷ್ಣಿಯ ಮಕ್ಕಳು. ಪಾಂಡು, ಕುಂತಿಯ ರೂಪವರ್ಣನೆಯನ್ನು ಕೇಳಿಯೇ ಮೋಹದಿಂದ ಕೊರಗತೊಡಗಿದನು. ಒಂದು ದಿನ ಅವನಿಗೆ ಒಂದು ಉಂಗುರವು ಕಾಡಿನಲ್ಲಿ ಸಿಕ್ಕಿತು. ಅವನು ಅದನ್ನು ಕೈಯಲ್ಲಿಟ್ಟುಕೊಂಡು ನೋಡುತ್ತಿರಲು ವಿದ್ಯಾಧರನೊಬ್ಬನು ಅಲ್ಲಿಗೆ ಬಂದು ಆ ಉಂಗುರವನ್ನ ತನ್ನದೆಂದು ಹೇಳಿದೊಡನೆ ಪಾಂಡು ಅದನ್ನು ಹಿಂತಿರುಗಿಸಿದನು. ಆ ವಿದ್ಯಾಧರನೂ ಅದನ್ನು ಪಾಂಡುವಿಗೆ ಕೆಲವು ದಿನಗಳ ಮಟ್ಟಿಗೆ ಕೊಟ್ಟು ಅದರ ಮಹಿಮೆಯನ್ನು ವರ್ಣಿಸಿದನು. ಪಾಂಡು

ಅದನ್ನು ಧರಿಸಿ ಅದೃಶ್ಯವಾಗಿ ಕುಂತಿಯ ಅಂತಃಪುರವನ್ನು ಪ್ರವೇಶಿಸಿ, ಅವಳ ಮನಸ್ಸನ್ನು ಒಲಿಸಿಕೊಂಡು ಅವಳ ಸಂಗವನ್ನು ಮಾಡಿ ಮತ್ತೆ ಅದೃಶ್ಯವಾಗಿ ಹೊರಟು ಹೋದನು. ಕುಂತಿಯು ಗರ್ಭಿಣಿಯಾದಳು. ಮಗು ಹುಟ್ಟಿದ ಬಳಿಕ ಅದನ್ನು ಬಿಟ್ಟು ಬಂದಳು. ಆದಿತ್ಯ ಎಂಬ ಅರಸನು ಮಗುವನ್ನು ತಂದು ತನ್ನ ರಾಣಿಯರ ಮುಂದೆ ನಿಲ್ಲಿಸಿ 'ಇದು ಯಾರ ಬಳಿಗೆ ತಾನಾಗಿ ಬರುವುದೋ, ಅದು ಅವಳ ಮಗು' ಎಂದನು. ಆ ಮಗು ರಾಧೆ ಎಂಬ ರಾಣಿಯ ಕೈಗೆ ಸಿಕ್ಕಿತು. ಆದರಿಂದ ಅದಕ್ಕ ರಾಧೇಯ ಎಂಬ ಹೆಸರು ಬಂದಿತು. ಈಗ ಜನಪ್ರಿಯ ಕಥೆಗೂ, ಜೈನಕಥೆಗೂ ಇರುವ ವ್ಯತ್ಯಾಸವನ್ನು ಗಮನಿಸಿ.

## ಕೃತಿಯ ಭಾಷೆ, ಶೈಲಿ

ನೇಮಿಚಂದ್ರನು ಚತುರ್ಭಾಷಾ ಪಂಡಿತ. ಸಂಸ್ಕೃತ, ಕನ್ನಡ, ಪ್ರಾಕೃತ, ಅಪಭ್ರಂಶ ಭಾಷೆಗಳನ್ನು ಚನ್ನಾಗಿ ಬಲ್ಲವನು, ಸಂಸ್ಕೃತ ಕನ್ನಡಗಳಲ್ಲಿ ಕವಿತ್ವ ಶಕ್ತಿಯು ಬಹಳ ಸೊಗಸಾಗಿದೆ. ಆತನು ತನ್ನ ಕೃತಿಗಳಲ್ಲಿ ಇನ್ನು ಬೇರೆ ಯಾವ ಕವಿಗಳಲ್ಲಿಯೂ ಸಿಗದಷ್ಟು ಅಪೂರ್ವ ಶಬ್ದಗಳನ್ನು ಬಳಸಿದ್ದಾನೆ. ಸಂಸ್ಕೃತ ಶ್ಲೋಕಗಳನ್ನು ತುಂಬಾ ಸೇರಿಸಿದ್ದಾನೆ, ಪ್ರಾಕೃತ ನಾಣ್ನುಡಿಗಳೂ ಇವೆ. ಕನ್ನಡದ ತ್ರಿಪದಿ, ರಗಳೆ, ಕಂದಗಳನ್ನು ಬಳಸಿರುವುದೇ ಅಲ್ಲದೆ ಸಂಸ್ಕೃತದ ಕೆಲವು ವಿರಳವಾದ ವೃತ್ತಗಳನ್ನೂ ಬಳಸಿದ್ದಾನೆ. ಸಂಸ್ಕೃತ, ಪ್ರಾಕೃತ, ದೇಸಿ ಭಾಷೆಗಳ ಹದವಾದ ಬಳಕೆಯನ್ನು ಇಲ್ಲಿ ಕಾಣುತ್ತೇವೆ, 'ನೇಮಿಯ ದೇಸಿ'ಯನ್ನು ಕುರಿತು ಅನಂತರದ ಕೆಲವು ಕವಿಗಳು ಮೆಚ್ಚಿಗೆಯನ್ನು ತೋರಿಸಿದ್ದಾರೆ. ಆದರೆ ನೇಮಿಚಂದ್ರನು ಸಂಸ್ಕೃತ ಪಂಡಿತನಾಗಿದ್ದುದರಿಂದ ಹೆಚ್ಚು ಸಂಸ್ಕೃತ ಶಬ್ದಗಳನ್ನು ಸೇರಿಕೊಂಡಿವೆ. ಆ ಕಾಲದಲ್ಲಿ ಇಂತಹ ಪ್ರಯೋಗವು ಸಹಜವಾಗಿಯೆ ಇತ್ತು. ಅನೇಕ ಕಡೆ ಬಹಳ ಸೊಗಸಾದ ದೇಸಿಯಿಂದ ಕೂಡಿದ ಕನ್ನಡ ಶಬ್ದಗಳೆ ಬಳಕೆಯಾಗಿರುವುದನ್ನೂ ಕಾಣಬಹುದು.

## ಶೈಲಿ

ನೇಮಿಚಂದ್ರನ ಶೈಲಿಯು ಸಂಸ್ಕೃತ ಪ್ರಾಕೃತ ಭಾಷೆಗಳ ಶಿಲ್ಪದಿಂದ ಕೆಲವು ಕಡೆ ಪ್ರಸಾದಗುಣದಿಂದ ದೂರವಾಗಿದ್ದರೆ. ಇನ್ನೂ ಕೆಲವು ಕಡೆ ದೇಸಿಯ ಸೊಬಗಿನಿಂದ ರಂಜಿಸುತ್ತದೆ. ನಾಣ್ನುಡಿಗಳು, ನೀತಿಯ ಮಾತುಗಳು ತುಂಬಿಕೊಂಡಿವೆ. ಶೃಂಗಾರ ರಸವೇ ಕವಿಗೆ ಮುಖ್ಯ. ಖ್ಯಾತ ಕರ್ನಾಟಕಗಳ ಜೊತೆಗೆ ರಗಳೆ, ತ್ರಿಪದಿಗಳನ್ನೂ ಬಳಸಿಕೊಂಡಿದ್ದಾನೆ. ಕಂದ ಪದ್ಯರಚನೆಯಲ್ಲಿ ವಿಶೇಷವಾಗಿ ಪರಿಣತಿಯನ್ನು ತೋರಿಸಿದ್ದಾನೆ.. ಉಪಮೆ, ರೂಪಕಗಳನ್ನು ಉಚಿತ ರೀತಿಯಲ್ಲಿ ಪ್ರಯೋಗಿಸಿದ್ದಾನೆ, ಉದಾಹರಣೆಗೆ 'ಗಾಳಿಗೆ ಗರಿ ಮೂಡಿದಂತೆ', 'ಕೋಣನೇರಿದ ಭಗವತಿಯಂತೆ' ಪೂವಂ ತೋರದೆ ಪನಸು ಫಲ ಪಡೆದಂತೆ' ಇತ್ಯಾದಿ. ಲೋಕೋಕ್ತಿಗಳನ್ನು, ದೃಷ್ಟಾಂತಗಳನ್ನು ಹದವರಿತು ಪ್ರಯೋಗಿಸಿದ್ದಾನೆ. ಉದಾಹರಣೆಗೆ 'ಪಾಪಾಗಿ ಪುಟ್ಟಿ ಧನಮಂ ಕಾವಂತುಟೆ' 'ಕಣ್ಮಲರರಿಯದೆ ಮನಂ ಅರಿದುದು' 'ಸಮೆದುದಕ್ಕೆ ಶಾಸ್ತ್ರವುಂಟೆ' 'ಆನೆಯೆತ್ತುವಂಗಾಡು ಚಿಕ್ಕಾದು' ಇತ್ಯಾದಿ. ನೇಮಿಚಂದ್ರನ ಶೈಲಿಯಲ್ಲಿ ಮೃದುಪದಗಳಿಗೆ ಅವಕಾಶ ದೊರೆತಿದೆ. ಪಂಪಾದಿ ಕವಿಗಳಂತೆ ವೀರಕಾವ್ಯವನ್ನು ಬರೆದಿದ್ದರೆ ಆತನ ಪ್ರತಿಭೆ ಪಾಂಡಿತ್ಯಗಳು ಹೆಚ್ಚು ಪ್ರಕಟವಾಗುತ್ತಿದ್ದುವು ಎಂಬ ಅಭಿಪ್ರಾಯವಿದೆ.

## ಕೃತಿಗಳ ಮಹತ್ವ

ಅ) ಲೀಲಾವತಿ ಕಾವ್ಯವು ಒಂದು ಲೌಕಿಕಕಾವ್ಯ. ಕವಿಯು ಬೇರೆ ಬೇರೆ ಕೃತಿಗಳಲ್ಲಿ ಬರುವ ಸನ್ನಿವೇಶಗಳನ್ನೂ, ಜಾನಪದ ಆಶಯಗಳನ್ನು ಸೇರಿಸಿ ಸ್ವತಂತ್ರವಾದ ಕಲ್ಪನೆಗಳನ್ನು ಬೆರೆಸಿ ಕಥೆಯನ್ನು ರೂಪಿಸಿಕೊಂಡಿದ್ದಾನೆ. ಹಿಂದೆ ಇಂತಹ ಕಾವ್ಯಗಳ ಸೃಷ್ಟಿ ಆಗುತ್ತಿರಲಿಲ್ಲ ಅಥವಾ ತುಂಬಾ ವಿರಳವಾಗಿ ಆಗಿರಬಹುದು. ಈ ಕವಿಯು ಹಿಂದಿನ ಸಂಪ್ರದಾಯವನ್ನು ಬಿಟ್ಟು, ಹೊಸ ಮಾರ್ಗವನ್ನು ಹಿಡಿದಿದ್ದಾನೆ. ಬಾಣನ ಕಾದಂಬರಿಯ ವಸ್ತು ವಿಷಯ ಈತನಿಗೆ ಪ್ರೇರಣೆಯನ್ನು ಕೊಟ್ಟಿದೆ. 'ಶೃಂಗಾರಮಂ ಕಾವ್ಯ ಬಂಧನದೊಳ್ ಸೆರೆಗೆಯ್ದು' ಬರೆದಿದ್ದೇನೆಂದು ಹೇಳಿಕೊಂಡಿದ್ದಾನೆ. ಕೃತಿಯನ್ನು ಮನ್ಮಥ ಪ್ರಾರ್ಥನೆಯಿಂದ ಪ್ರಾರಂಭಿಸಿದ್ದಾನೆ. ಜಾನಪದ ಆಶಯಗಳು ಸೇರಿರುವುದರಿಂದ ಅನೇಕ ರೋಮಾಂಚಕಾರಿಯಾದ ಘಟನೆಗಳು

ಇಲ್ಲಿವೆ. ಓದುಗನನ್ನು ಬೇರೊಂದು ಲೋಕಕ್ಕೆ ಕೊಂಡೊಯ್ಯುವ ಸನ್ನಿವೇಶಗಳನ್ನು ಸೃಷ್ಟಿಸಿದ್ದಾನೆ. ತನ್ನ ಕಾರ್ಯಕ್ಕೆ ತಕ್ಕ ಸಮರ್ಥನೆಯನ್ನು ಮಾಡಿಕೊಂಡಿದ್ದಾನೆ.

'ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ| ವಾಮನುಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ | ಹರನಂ ನರವಿಕ್ಕಿ ಗಂಟಲ
ಮೆಟ್ಟುಗೆ ಮೆಟ್ಟದಿರ್ಕೆ | ಕವಿಗಳ್ ಕೃತಿ ಬಂಧದೊಳಲ್ತೆ ಕಟ್ಟಿದರ್
ಮುಟ್ಟಿದರಿಕ್ಕಿ ಮೆಟ್ಟಿದರಿದೇನಳವಗ್ಗಳಮೋ ಕವೀಂದ್ರರಾ'

-'ಶ್ರೀರಾಮನ ಕಪಿ ಸೈನ್ಯವು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದರೋ ಇಲ್ಲವೋ, ವಾಮನನ್ನು ತ್ರಿವಿಕ್ರಮನಾಗಿ ತನ್ನ ಒಂದು ಹೆಜ್ಜೆಯಿಂದ ಆಕಾಶವನ್ನೆಲ್ಲ ಮುಟ್ಟಿದನೋ ಇಲ್ಲವೋ, ಅರ್ಜುನನು ಶಿವನೊಡನೆ ಯುದ್ಧಮಾಡಿ ಅವನ ಗಂಟಲನ್ನು ಕಾಲಿನಿಂದ ಮೆಟ್ಟಿದನೋ ಇಲ್ಲವೋ, ಕವಿಗಳು ಮಾತ್ರ ತಮ್ಮ ಕಾವ್ಯಗಳಲ್ಲಿ ಇವೆಲ್ಲವನ್ನೂ ಮಾಡಿಸಿದ್ದಾರೆ. ಅದೇನು ರವೀಂದ್ರರ ಶಕ್ತಿ!' ಎಂದು ಆಶ್ಚರ್ಯ ಪಟ್ಟಿದ್ದಾನೆ. ಲೀಲಾವತಿ ಕಾವ್ಯದಲ್ಲಿಯೂ ಹೀಗೆಯೇ ಆಶ್ಚರ್ಯಗೊಳಿಸುವ ಸನ್ನಿವೇಶಗಳನ್ನು, ಘಟನೆಗಳನ್ನು ರೂಪಿಸಿದ್ದಾನೆ. ಒಟ್ಟಾರೆ ನವರಸಗಳನ್ನೂ, ಅಷ್ಟಾದಶ ವರ್ಣನೆಗಳನ್ನೂ ಸೇರಿಸಿದ್ದಾನೆ. ಒಟ್ಟಾರೆ ಲೀಲಾವತಿಯು ಹೊಸದೊಂದು ಸಂಪ್ರದಾಯವನ್ನು ಸೃಷ್ಟಿಸಿತು ಎನ್ನಬಹುದು.

ಆ) ನೇಮಿನಾಥಪುರಾಣಕ್ಕೆ ಅರ್ಧನೇಮಿ ಎಂಬ ಹೆಸರೂ ಇದೆ. ಜೈನಮತಕ್ಕೆ ಸೇರಿದ ಕವಿಗಳು ಕಾವ್ಯ ಧರ್ಮವನ್ನು 'ಧರ್ಮ' (ಅಂದರೆ ಮತವೇ) ದೊಡನೆ ಸೇರಿಸಿ ಪುರಾಣ ಕಾವ್ಯಗಳನ್ನು ರಚಿಸಿದ್ದಾರೆ. ಕಥೆಯ ಮೂಲ ಸ್ವರೂಪವನ್ನು ಕವಿಗಳು ಬದಲಾಯಿಸುವಂತಿಲ್ಲ. ಅವರು ಸಿದ್ಧವಾದ ಚೌಕಟ್ಟಿನೊಳಗೇ ವರ್ಣನೆಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿಕೊಳ್ಳಬಹುದು. ಉದಾಹರಣೆಗೆ ಅರ್ಹದ್ದಾಸ ಜಿನದತ್ತೆಯರಿಗೆ ಮಕ್ಕಳು ಆಗಿರಲಿಲ್ಲ. ಜೈನ ಮುನಿಯೊಬ್ಬರು ಭಿಕ್ಷೆಗೆ ಬರುತ್ತಾರೆ. ಅವರನ್ನು ಊಟಕ್ಕೆ ಕರೆಯಲು ಜಿನದತ್ತೆ ಹೋದಾಗ ಅವರು 'ನಿನ್ನ ಪತಿ ಅಥವಾ ಪುತ್ರ' ಬಂದು ಕರೆಯಲಿ ಎನ್ನುತ್ತಾರೆ. ಅವಳಿಗೆ ಕೊರಗು ಹೆಚ್ಚಾಗುತ್ತದೆ. ಮುಂದೆ ಮುನಿಗಳೇ (ಇನ್ನೊಂದು ದಿನ ) ಪರಿಹಾರವನ್ನೂ ಸೂಚಿಸುತ್ತಾರೆ. ಇದೆಲ್ಲವೂ ಸಾಕಷ್ಟು ದೀರ್ಘವಾಗಿ ವರ್ಣಿಸಲ್ಪಟ್ಟಿದೆ.

ವಸುದೇವನ ಸೌಂದರ್ಯವು ಅಮೋಘವಾದುದು. ಅವನನ್ನು ನೋಡಿ ಹೆಣ್ಣು ಮಕ್ಕಳು ಪರವಶರಾಗುತ್ತಿದ್ದರು ಎಂಬ ಸಂಪ್ರದಾಯದ ಮಾತನ್ನು ಬದಲಿಸಿ, ಹುಟ್ಟುತ್ತಿದ್ದ ಹೆಣ್ಣುಮಕ್ಕಳೆಲ್ಲರು ವಸುದೇವನ ಪ್ರತಿರೂಪದಂತೆ ಇದ್ದು, ಗಂಡಸರು ದಿಗ್ಭ್ರಾಂತರಾಗುತ್ತಿದ್ದರು ಎಂದು ಕವಿಯು ಹೇಳುತ್ತಾನೆ. ಇಂತಹ ಅನೇಕ ಬದಲಾವಣೆಗಳನ್ನು ಮಾಡಿಕೊಂಡು ಕಾವ್ಯದ ಮಹತ್ವವನ್ನು ಹೆಚ್ಚಿಸಿದ್ದಾನೆ. ನೇಮಿಚಂದ್ರನಿಗೆ ಕಲ್ಪನಾಶಕ್ತಿಯು ಅಗಾಧವಾಗಿದ್ದುದೂ ಇದಕ್ಕೆ ಕಾರಣ. ಈ ಕಾವ್ಯದಲ್ಲಿ ಕವಿಯು ಪಾಂಡಿತ್ಯವನ್ನು ಹಿಂದಕ್ಕೆ ಸರಿಸಿ ಆನಂದವನ್ನು ನೀಡುವ ಕಾರ್ಯವನ್ನು ಮಾಡಿದ್ದಾನೆ.

## 2.5.4 ಕೃತಿ ವಿಮರ್ಶೆ

ಅ) ಲೀಲಾವತಿಯು ಶೃಂಗಾರರಸ ಪ್ರಧಾನವಾದ ಕಾವ್ಯ. ಶೃಂಗಾರರಸವು ಜೀವಿಗಳಿಗೆ ಅತ್ಯಂತ ಪ್ರಿಯವಾದುದು. ಲೋಕದಲ್ಲಿ ನಮಗೆ ಅತ್ಯಂತ ಪ್ರಿಯವಾದುದೇ ಅತ್ಯಂತ ನೋವನ್ನೂ ಉಂಟು ಮಾಡುತ್ತದೆ 'ಅತಿ ಪ್ರೀತಿ ಪಾಪಶಂಕೀ' ಎಂಬ ಮಾತಿದೆ. ಶೃಂಗಾರವು ಒಂದು ಮಿತಿಯಲ್ಲಿ ಇಲ್ಲದಿದ್ದರೆ, ಮನುಷ್ಯ ಸಮಾಜ, ರಾಜ್ಯಗಳೂ, ರಾಷ್ಟ್ರಗಳೂ ಹಾಳಾಗುತ್ತವೆ. ಇದಕ್ಕೆ ಚರಿತ್ರೆಯನ್ನು ಓದಿ ತಿಳಿಯಬಹುದು.

ನೇಮಿಚಂದ್ರನು ಲೀಲಾವತಿ ಕಾವ್ಯದಲ್ಲಿ ಜೈನಧರ್ಮದ ಛಾಯೆಯು ಬೀಳುವಂತೆ ಮಾಡಿದ್ದಾನೆ. ಕಂದರ್ಪದೇವ, ಲೀಲಾವತಿ ಇವರು ಜೈನಮತದವರು ಎಂಬುದನ್ನು ಸ್ಪಷ್ಟಪಡಿಸುತ್ತಾನೆ. ಜಿನೇಶ್ವರ ಮಹಿಮೆಯನ್ನೂ ಬಿಂಬಿಸುತ್ತಾನೆ ; ತನ್ನ ಕಾಲದ ಸಾಮಾಜಿಕ ಚಿತ್ರವನ್ನೂ ಕೊಡುತ್ತಾನೆ. ರಸನಿರೂಪಣೆ ಯಲ್ಲಿ ನೇಮಿಚಂದ್ರನು ನಿಪುಣನಾಗಿದ್ದಾನೆ. ರಸವೇ ಅತ್ಯಂತ ಮುಖ್ಯವಾದುದು ಎಂದು ಹೇಳುತ್ತಾ

ನೀರಸರಾದ ಕವಿಗಳನ್ನು ಮೂದಲಿಸಿದ್ದಾನೆ. ಆದರೆ ಆತನ ಶೃಂಗಾರರಸ ನಿರೂಪಣೆಯು ಮನಸ್ಸನ್ನು ತುಂಬಾ ಚಂಚಲಗೊಂಡು ವಾಚ್ಯವೇ ಹೆಚ್ಚಾಗಿದೆ. "ಸ್ತ್ರೀರೂಪಮೆ ರೂಪಂ" ಎಂಬ ನಿರ್ಧಾರದಿಂದ ಹೊರಟು ಕವಿಯು ಹೆಣ್ಣಿನ ರೂಪಕ್ಕೆ ಪ್ರಾಧ್ಯಾವಿತ್ತು ನಖಶಿಖಾಂತವಾಗಿ ದೇಹದ ವರ್ಣನೆ ಮಾಡುತ್ತಾನೆ. ಓದುಗರ ಮುಜುಗರಕ್ಕೆ ಗುರಿಯಾಗುತ್ತಾರೆ. ಪಾತ್ರಗಳು ಕೇವಲ ಕವಿಯ ಕೈಯಲ್ಲಿರುವ ಸೂತ್ರದ ಬೊಂಬೆಗಳಂತೆ ಆಗಿಬಿಟ್ಟಿದ್ದಾರೆ. ಕವಿತಾಶಕ್ತಿಯ ಬಗ್ಗೆ ಮಾತ್ರ ನೇಮಿಚಂದ್ರನಿಗೆ ಇತ್ತು. ಸಮಾನರು ತುಂಬಾ ಕಡಿಮೆ. ಆದರೆ ಶಕ್ತಿಯೊಂದೆ ಮುಖ್ಯವಲ್ಲ ಭೀಮನಿಗಿದ್ದಂತೆ ಕೀಚಕನಿಗೂ ಇತ್ತು. ಆದರೆ ಅದನ್ನು ಹೇಗೆ ಬಳಸಬೇಕೆಂಬುದೇ ಮುಖ್ಯ. ಆದ್ದರಿಂದ ಲೀಲಾವತಿಯು ಪಂಪಾದಿಗಳ ಕೃತಿಗಳಿಗೆ ಸಮವಾಗಿ ನಿಲ್ಲುವುದಿಲ್ಲ.

ಆ) ನೇಮಿನಾಥ ಪುರಾಣದಲ್ಲಿ ನೇಮಿನಾಥನ ಕಥೆಯೇ ಬಂದಿಲ್ಲ. ಅವನ ಪೂರ್ವಜನ್ಮಗಳ ವಿಚಾರವಿದೆ. ಭವಾವಳಿ ವರ್ಣನೆಯು ವಿಸ್ತಾರವಾಗಿ ಬಂದಿದೆ ಒಂದೇ ಕಥೆಯನ್ನು ಬೆಳೆಸಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು. ಪಂಪ, ರನ್ನ ಮುಂತಾದವರು ಒಂದೇ ಕಥೆಯನ್ನು ಹೇಳಿದ್ದಾನೆ. ಚಕ್ರವರ್ತಿಗಳ ಆಖ್ಯಾನವು ಅನಿವಾರ್ಯವಾಗಿ ಬಂದಿದೆ. ಆದರೆ ನೇಮಿಚಂದ್ರನು ಹರಿವಂಶದ ಕಥೆಯನ್ನು ವಿಸ್ತಾರವಾಗಿ ಹೇಳಲು ಹೊರಟು ನೇಮಿನಾಥನ ವಿಷಯವು ಬರುವ ಮೊದಲೇ ಮರಣ ಹೊಂದಿದ್ದಾನೆ. ಉಪಾಖ್ಯಾನಗಳು ತಮಗೆ ತಾವು ಸ್ವಾರಸ್ಯಪೂರ್ಣವಾಗಿವೆ. ವರ್ಣನೆ ರಸ ಸೃಷ್ಟಿಯಲ್ಲಿ ಕವಿಯು ಯಶಸ್ವಿಯಾಗಿದ್ದಾನೆ. ಆದರೆ ಔಚಿತ್ಯದ ಪ್ರಶ್ನೆಯು ಎದುರಾದಾಗ ಅವನನ್ನು ಹೊಗಳುವುದು ಕಷ್ಟವಾಗುತ್ತದೆ. ತಾನು ಹೇಳುತ್ತಿರುವ ಕಥೆಯ ವಿವರಗಳನ್ನು ಚನ್ನಾಗಿ ವರ್ಣಿಸುತ್ತಾನೆ. ಕೆಲವುಕಡೆ ಉತ್ಪ್ರೇಕ್ಷೆಯನ್ನು ತುಂಬುತ್ತಾನೆ. ಆಧುನಿಕ ಯುಗದ ಓದುಗರ ದೃಷ್ಟಿಯಿಂದ ಕಾವ್ಯವನ್ನು ನೋಡಿದಾಗ ಮೂಡುವ ಭಾವನೆಯೆಂದರೆ ಏಕ ಸೂತ್ರತೆ ಇರಬೇಕಾಗಿತ್ತು ಎನ್ನುವುದು. ಕವಿಯು ಈ ಕಾವ್ಯದಲ್ಲಿ ಒಂದು ಕಡೆ ಹೀಗೆ ಹೇಳುತ್ತಾನೆ.

'ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ | ಭುವನದ ಭಾಗ್ಯದಿಂದ ಮಕ್ಕುಂನೋಳ್ಪಂ|
ಬೆಲೆಗೊಟ್ಟುತಾರ |ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ'||

ಇದರ ಅರ್ಥ: "ಮೂರ್ಖನೆ, ಒಂದು ಕಾವ್ಯಕ್ಕೆ ಹಣದಿಂದ ಬೆಲೆಯನ್ನು ಕಟ್ಟಲಾಗುತ್ತದೆಯೆ. ಈ ಲೋಕದ ಅದೃಷ್ಟದಿಂದ ಕಾವ್ಯರಚನೆ ಆಗುತ್ತದೆ. ನೋಡೋಣ ಹಣ ಕೊಟ್ಟು ವಸಂತ ಮಾಸವನ್ನು, ಮಲಯ ಪರ್ವತದ ಕಡೆಯಿಂದ ಬೀಸುವ ಗಾಳಿಯನ್ನು, ಮನ್ಮಥನನ್ನು, ಬೆಳುದಿಂಗಳನ್ನು ತೆಗೆದುಕೊಂಡು ಬಾ (ಉಂಟಾಗುವಂತೆ ಮಾಡು) ಇದು ಬಹಳ ಸೊಗಸಾದ ಪದ್ಯ. ಹಣದಿಂದ ಏನನ್ನು ಬೇಕಾದರೂ ಕೊಂಡುಕೊಳ್ಳಬಲ್ಲೆನೆಂಬ ಮಾತು ಇಲ್ಲಿ ಬಿದ್ದು ಹೋಗುತ್ತದೆ. ನೇಮಿಚಂದ್ರನು ಪಂಡಿತ, ಪ್ರತಿಭಾವಂತ, ಸೊಗಸಾಗಿ ಬರೆಯಬಲ್ಲನು. ಆದರೆ ತನಗೆ ಗೊತ್ತಿರುವುದೆಲ್ಲವನ್ನೂ ಹೇಳಿಬಿಡಬೇಕು ಎಂಬ ಆಸೆಯಿಂದ ಕಾವ್ಯದ ಹದವನ್ನು ಗಮನಿಸಲಿಲ್ಲ ಎನ್ನಿಸುತ್ತದೆ.

## 2.6 ರುದ್ರಭಟ್ಟ : ಕವಿಯ ಕಾಲ ದೇಶ ಕೃತಿ ವಿಚಾರ

### 2.6.1 ಕಾಲ ವಿಚಾರ

ಅನೇಕ ಕನ್ನಡ ಕವಿಗಳ ಹಾಗೆ ರುದ್ರಭಟ್ಟನೂ ಕೂಡ ತನ್ನ ಕಾಲದೇಶ ವಿಚಾರಗಳನ್ನು ಹೇಳಿಕೊಂಡಿಲ್ಲ. ಈ ಕವಿಯು ಕಣ್ಣಪನನ್ನು ಸ್ಮರಿಸಿರುವುದರಿಂದ ಕಣ್ಣಪನ (ಕರ್ಣಪಾರ್ಯ ಕವಿ) ಕಾಲಕ್ಕಿಂತ ಅಂದರೆ ೧೧೪೦ಕ್ಕಿಂತ ಈಚೆ ಇದ್ದನೆಂದು ತಿಳಿಯಬೇಕಾಗುತ್ತದೆ. ರುದ್ರಭಟ್ಟನು ಚಂದ್ರಮೌಳಿಯ ಹೆಸರನ್ನು ಮತ್ತು ಉಮಾದೇವಿಯ ಹೆಸರನ್ನು ಹೇಳಿರುವುದರಿಂದ ಹೊಯ್ಸಳ ರಾಜ ವೀರಬಲ್ಲಾಳನ ಕಾಲದಲ್ಲಿ (೧೧೭೩-೧೨೨೦) ಬದುಕಿದ್ದನೆಂದು ತಿಳಿಯಬಹುದು. ಏಕೆಂದರೆ

ಚಂದ್ರಮೌಳಿಯು ವೀರಬಲ್ಲಾಳನ ಮಂತ್ರಿ ಮತ್ತು ಉಮಾದೇವಿಯು ವೀರಬಲ್ಲಾಳನ ಪತ್ನಿ. ರುದ್ರಭಟ್ಟನು "ಜಗನ್ನಾಥ ವಿಜಯ"ವನ್ನು ಸುಮಾರು ೧೨೧೮-೨೦ರ ಅವಧಿಯಲ್ಲಿ ಬರೆದಿರಬೇಕೆಂದು ತಿಳಿಯಲಾಗಿದೆ.

### 2.6.2 ದೇಶ ವಿಚಾರ

ಈ ಮೊದಲೇ ಹೇಳಿರುವಂತೆ ರುದ್ರಭಟ್ಟನ ಹುಟ್ಟಿದ ಊರು ಯಾವುದೆಂಬುದು ತಿಳಿದು ಬರುವುದಿಲ್ಲ. ಆದರೆ ಅವನು ಹೊಯ್ಸಳ ವೀರಬಲ್ಲಾಳನ ಮಂತ್ರಿ ಚಂದ್ರಮೌಳಿಯ ಸಹಾಯವನ್ನು ಪಡೆದಿದ್ದನೆಂಬುದು ತಿಳಿದುಬರುತ್ತದೆ. ಆದ್ದರಿಂದ ರುದ್ರಭಟ್ಟನು ಎಲ್ಲಿಯೇ ಹುಟ್ಟಿರಲಿ, ಕೃತಿರಚನೆ ಮಾಡುವ ಕಾಲದಲ್ಲಿ ದ್ವಾರಸಮುದ್ರದಲ್ಲಿದ್ದನೆಂದು (ಹಳೇಬೀಡು) ತಿಳಿಯಬಹುದು. ರಾಜಾಶ್ರಯವನ್ನೂ ಪಡೆದಿದ್ದನೆಂದು ಭಾವಿಸಿದರೆ ತಪ್ಪಾಗಲಾರದು.

### 2.6.3 ಕೃತಿಗಳು

ರುದ್ರಭಟ್ಟನು ರಚಿಸಿರುವ ಕಾವ್ಯವು "ಜಗನ್ನಾಥ ವಿಜಯ" ಎಂಬ ಚಂಪೂ ಕಾವ್ಯ. ಈ ಕವಿಯು ವಿಷ್ಣು ಪಾರಮ್ಯದ ಕಥೆಯನ್ನು ಆರಿಸಿಕೊಂಡಿರುವುದು ಅವನ ಉತ್ತಮದೃಷ್ಟಿಗೆ ನಿದರ್ಶನವಾಗಿದೆ. ಕಾಳಿದಾಸನ ಶ್ರೇಷ್ಠತೆಯನ್ನು ಕುರಿತು ರುದ್ರಭಟ್ಟನು ಸ್ತುತಿಸಿದ್ದಾನೆ. ಸಾಳ್ವ ಕವಿಯು (1550) ತನ್ನ 'ರಸರತ್ನಾಕರದಲ್ಲಿ ರುದ್ರಭಟ್ಟಕೃತ "ರಸಕಳಿಕೆ" ಗ್ರಂಥದ ಬಗ್ಗೆ ಹೇಳುತ್ತಾನೆ. ಈ ಗ್ರಂಥದ ಕರ್ತೃವು ಜಗನ್ನಾಥವಿಜಯದ ರುದ್ರಭಟ್ಟನೋ, ಅಥವಾ ಇನ್ನೊಬ್ಬ ರುದ್ರಭಟ್ಟನೋ ಎಂಬುದು ಸ್ಪಷ್ಟವಾಗು ವುದಿಲ್ಲ. ಆದ್ದರಿಂದ ನಮಗೆ ದೊರೆತಿರುವ ಸ್ಪಷ್ಟ ಆಧಾರಗಳ ಪ್ರಕಾರ ರುದ್ರಭಟ್ಟನು 'ಜಗನ್ನಾಥ ವಿಜಯ' ಕಾವ್ಯವನ್ನು ಮಾತ್ರ ರಚಿಸಿದ್ದಾನೆಂದು ಭಾವಿಸಬೇಕಾಗಿದೆ. ಇದರಲ್ಲಿ ಹದಿನೆಂಟು ಆಶ್ವಾಸಗಳಿವೆ.

### ಕೃತಿ ಪರಿಚಯ 'ಜಗನ್ನಾಥ ವಿಜಯ'

ಸಂಸ್ಕೃತದ 'ವಿಷ್ಣುಪುರಾಣ'ವು 'ಜಗನ್ನಾಥ ವಿಜಯ'ಕ್ಕೆ ಆಕರ ಗ್ರಂಥವಾಗಿದೆ. ವಿಷ್ಣುಪುರಾಣದಲ್ಲಿ ಐದನೆಯ ಅಂಕದಲ್ಲಿರುವ ೩೮ ಅಧ್ಯಾಯಗಳು ಶ್ರೀ ಕೃಷ್ಣ ಚರಿತೆಯನ್ನು ಒಳಗೊಂಡಿವೆ. ರುದ್ರಭಟ್ಟನು ಈ ಭಾಗದ ಕಥೆಯನ್ನು ತನ್ನ ಕಾವ್ಯಕ್ಕೆ ಆಧಾರವನ್ನಾಗಿಟ್ಟುಕೊಂಡಿದ್ದಾನೆ. ವಿಷ್ಣುಪುರಾಣದ ಪಂಚಮಾಂಕದಲ್ಲಿ ಶ್ರೀ ಕೃಷ್ಣನ ಜನನ, ಪೂತನಿ ಮುಂತಾದವರ ಸಂಹಾರ, ಕಾಳೀಯದಮನ ಮುಂತಾದ ಸಾಹಸಕಾರ್ಯಗಳ ವರ್ಣನೆ ಇದ್ದು ಬಾಣಾಸುರ ಪರಾಜಯದವರೆಗೆ ಕಥೆಯು ಮುಂದುವರಿಯುತ್ತದೆ. ವಿಷ್ಣುಪುರಾಣದ ಕಥೆಯನ್ನು ಒಂದು ಲೋಹದ ಅದುರಿಗೆ ಹೋಲಿಸಿದರೆ ಜಗನ್ನಾಥ ವಿಜಯವು ಆ ಅದುರಿನಿಂದ ಬಂದ ಶುದ್ಧಲೋಹದಂತಿದೆ ಎನ್ನಬಹುದು. ಮೂಲ ಕಥೆಯು ಪುರಾಣವಾದರೆ ಜಗನ್ನಾಥ ವಿಜಯವು ಒಳ್ಳೆಯ ಕಾವ್ಯವಾಗಿದೆ.

### ಕಥಾವಸ್ತು

ಒಂದು ಕಾವ್ಯಕ್ಕೆ ಕಥಾವಸ್ತುವು ಅಸ್ಥಿಪಂಜರದಂತೆ ಇರುತ್ತದೆ. ಅಸ್ಥಿಪಂಜರವು ಇಲ್ಲದೆ ಮನುಷ್ಯನಿಗೆ ಈಗಿರುವ ಆಕಾರವು ಬರುತ್ತಿರಲಿಲ್ಲ ಎಂಬುದನ್ನು ನೀವು ತಿಳಿದಿದ್ದೀರಿ. ಆದರೆ ಅಸ್ಥಿಪಂಜರವು ಮನುಷ್ಯನಾಗುವುದಿಲ್ಲವೆಂಬುದೂ ನಿಮಗೆ ಗೊತ್ತು. ಇಲ್ಲಿ ಅಸ್ಥಿಪಂಜರದ ಸ್ವರೂಪ ವೇನೆಂದು ನೋಡಬಹುದು.

ಭೂಮಿಯಲ್ಲಿ ದುಷ್ಟರು ಹೆಚ್ಚಾದಾಗ ಭೂದೇವಿ ಕಷ್ಟಕ್ಕೆ ಗುರಿಯಾಗುತ್ತಾಳೆ. ಕಂಸನೂ ಕೂಡ ಅಂತಹ ಒಬ್ಬ ದುಷ್ಟ, ರಾಜನೂ ಕೂಡ. ನಾರದನು ಕಂಸನ ಆಸ್ಥಾನಕ್ಕೆ ಬಂದು 'ಅಚ್ಯುತನ್ನು ದೇವಕಿಯ ಮಗನಾಗಿ ಹುಟ್ಟಿ ಕಂಸ ಮೊದಲಾದ ದುಷ್ಟರನ್ನು ಸಂಹರಿಸುವ ನಿರ್ಧಾರವನ್ನು ತೆಗೆದುಕೊಂಡಿದ್ದಾನೆ' ಎಂದು ಹೇಳಿ ಹೋಗುತ್ತಾನೆ. ನಾರದನು ಬೀಜ ನೆಡುವ ಕೆಲಸವನ್ನು ಮಾಡಿಬಿಡುತ್ತಾನೆ, ಮುಂದಿನದು ತಾನಾಗಿಯೇ ಘಟಿಸುತ್ತದೆ.

ಕೃಷ್ಣನು ಹುಟ್ಟಿದ್ದು, ಯಶೋದೆಯ ಬಳಿ ಬೆಳೆದದ್ದು, ಬಾಲಲೀಲೆಗಳನ್ನು ತೋರಿಸಿದ್ದು, ರಾಸಕ್ರೀಡೆ ಆಡಿದ್ದು, ರಾಕ್ಷಸರನ್ನು ಕೊಂದಿದ್ದು ಮುಂತಾದ ಎಲ್ಲ ವಿವರಗಳೂ ನಿಮಗೆ ತಿಳಿದಿವೆ. ಕಂಸವಧೆಯ ಬಲರಾಮ, ಕೃಷ್ಣರು ಸಾಂದೀಪನಿ ಆಚಾರ್ಯರ ಬಳಿ ಶಿಷ್ಯವೃತ್ತಿ ಮಾಡುತ್ತಾರೆ.

ಜರಾಸಂಧನ ಹದಿನೆಂಟು ಆಕ್ರಮಣಗಳನ್ನು ಯಶಸ್ವಿಯಾಗಿ ಎದುರಿಸಿದ ಕೃಷ್ಣನು ಹತ್ತೊಂಬತ್ತನೆಯ ಸಲ ಎದುರಿಸದೆ ದೂರವಾಗಿ ಬಿಡುತ್ತಾನೆ. ಒಂದು ಪ್ರಶಸ್ತವಾದ ಸ್ಥಳವನ್ನು ಆರಿಸಿಕೊಂಡು ಆ ಊರಿಗೆ ದ್ವಾರಾವತಿ ಎಂಬ ಹೆಸರನ್ನು ಕೊಟ್ಟು ಅಲ್ಲಿಯೇ ನೆಲಸುತ್ತಾನೆ. ಅನಂತರ ಕೃಷ್ಣನು ರುಕ್ಮಿಣಿ ಮತ್ತು ಸತ್ಯಭಾಮೆಯರನ್ನು ವಿವಾಹವಾಗುತ್ತಾನೆ.

ನರಕಾಸುರನು ಹದಿನಾರು ಸಾವಿರ ಸ್ತ್ರೀಯರನ್ನು ಬಂಧನದಲ್ಲಿಟ್ಟಾಗ ದೇವೇಂದ್ರನ ಕೋರಿಕೆಯಂತೆ ನರಕನನ್ನು ಕೃಷ್ಣನು ವಧಿಸಿ ಹದಿನಾರು ಸಾವಿರ ಸ್ತ್ರೀಯರನ್ನು ವಿವಾಹವಾಗುತ್ತಾನೆ. ನಿಕುಂಭ ಎಂಬ ರಾಕ್ಷಸ, ಶಿಶುಪಾಲ ಇವರೂ ಕೃಷ್ಣನಿಂದಲೇ ಸಾಯುತ್ತಾರೆ. ಬಾಣಾಸುರನ ಮಗಳು ಉಷೆಯ ಸ್ವಪ್ನದಲ್ಲಿ ಕೃಷ್ಣನ ಮಗ ಅನಿರುದ್ಧನು ಕಾಣಿಸಿಕೊಳ್ಳುತ್ತಾನೆ. ಅವಳೇ ದ್ವಾರಾವತಿಗೆ ಹೋಗಿ ಅನಿರುದ್ಧನನ್ನು ಗಾಂಧರ್ವ ಪದ್ಧತಿಯಲ್ಲಿ ವಿವಾಹವಾಗುತ್ತಾಳೆ. ಬಾಣಾಸುರ ಕೋಪಗೊಂಡು ಅನಿರುದ್ಧನನ್ನು ಬಂಧಿಸುತ್ತಾನೆ. ಕೃಷ್ಣನಿಗೂ ಬಾಣಾಸುರನಿಗೂ ಯುದ್ಧವು ಘಟಿಸುತ್ತದೆ. ಬಾಣಾಸುರನು ಯುದ್ಧದಲ್ಲಿ ಸೋಲುತ್ತಾನೆ. ಕೃಷ್ಣನು ದ್ವಾರಾವತಿಯನ್ನು ಪ್ರವೇಶಿಸುವುದರೊಂದಿಗೆ ಜಗನ್ನಾಥ ವಿಜಯದ ಕಥಾಭಾಗವು ಮುಗಿಯುತ್ತದೆ.

ಇದುವರೆಗೆ ನೀವು ನೋಡಿದುದು ಘಟನೆಗಳ ಸರಮಾಲೆ. ಈ ಘಟನೆಗಳ ವರ್ಣನೆ, ಸಂಭಾಷಣೆ ಮುಂತಾದವು ಸೇರಿ ಕಾವ್ಯವಾಗಬೇಕಾಗಿದೆ, ಘಟನೆಗಳ ಸರಮಾಲೆಯು ಕೇವಲ ವರದಿಯಾಗುತ್ತದೆ. ಕವಿಯ ಪ್ರತಿಭೆ ಕ್ರಿಯಾಶೀಲವಾಗಿ ರಸವತ್ ಕಾವ್ಯವನ್ನು ಸೃಷ್ಟಿಸುತ್ತದೆ.

## ಪಾತ್ರಪರಿಚಯ

(ಅ) ಇದರಲ್ಲಿ ಬರುವ ಪಾತ್ರಗಳ ಪೈಕಿ ಕೃಷ್ಣ, ಕಂಸ, ಅನಿರುದ್ಧ, ರುಕ್ಮಿಣಿ, ಸತ್ಯಭಾಮೆ ಮುಂತಾದವರು ಪ್ರಮುಖರು. ಕೃಷ್ಣನ ಪಾತ್ರವು ಲೀಲೆಗೆ ಹೇಳಿ ಮಾಡಿಸಿದಂತಹುದು. ಲೀಲೆ ಎಂದರೆ ಅನೇಕರಲ್ಲಿ ತಪ್ಪು ಕಲ್ಪನೆಗಳಿವೆ. ಅದನ್ನು ಹೀನಾರ್ಥದಲ್ಲಿ ಬಳಸುವ ಕೆಟ್ಟ ಸಂಪ್ರದಾಯವಿದೆ. ಪ್ರಪಂಚದಲ್ಲಿ ಪ್ರತಿಯೊಂದೂ ಕಾರ್ಯಕಾರಣ ಸಂಯೋಗದಿಂದ ನಡೆಯುತ್ತದೆ. ಪ್ರಕೃತಿಯ ತತ್ತ್ವವನ್ನು ಮೀರಿ ನಡೆಯುದಿಲ್ಲ. ಉದಾಹರಣೆಗೆ ಮರದಿಂದ ಹಣ್ಣು ಕೆಳಕ್ಕೆ ಬೀಳುತ್ತದೆಯೇ ಹೊರತು ಮೇಲೆ ಹೋಗುವುದಿಲ್ಲ. ಬೆಂಕಿಯು ಸುಡುತ್ತದೆಯೇ ವಿನಾ ತಂಪಾಗುವುದಿಲ್ಲ. ಆದರೆ ಈ ವಿಷಯಗಳು ತದ್ವಿರುದ್ಧವಾದರೆ, ಅದು ಯಾರಿಂದ ಆಗುತ್ತದೆಯೋ ಆತನ ಲೀಲೆ ಎನ್ನುತ್ತಾರೆ. ಕೃಷ್ಣನ ಲೀಲೆ ಎಂದರೆ ಹೀಗೆಯೇ. ಆನೆಯನ್ನು ಕೊಲ್ಲುವುದು, ಕಾಳಿಂಗನನ್ನು ತುಳಿಯುವುದು, ಅಂದರೆ ನಮಗೆ ಭಾರ ಅವನಿಗೆ ಹಗುರ, ನಮಗೆ ಉಗ್ರ, ಅವನಿಗೆ ಸೌಮ್ಯ ಇತ್ಯಾದಿ. ಆದ್ದರಿಂದಲೇ ಅವನು ಹದಿನಾರು ಸಾವಿರ ಸ್ತ್ರೀಯರನ್ನು ನರಕಾಸುರನಿಂದ ಬಿಡಿಸಿ ವಿವಾಹವಾಗುತ್ತಾನೆ. ಅವನಿಗೆ ತನ್ನ ಸಾಮರ್ಥ್ಯ ಎಷ್ಟೆಂಬುದು ಗೊತ್ತು. ಜರಾಸಂಧನೇ ಆಕ್ರಮಿಸಲಿ, ಶಿಶುಪಾಲನೇ ನಿಂದಿಸಲಿ, ಬಾಣಾಸುರನೇ ಹರಿಹಾಯಲಿ, ಯಾವುದಕ್ಕೂ ವ್ಯಗ್ರನಾಗುವುದಿಲ್ಲ ಉಗ್ರನೂ ಆಗುವುದಿಲ್ಲ. ತಣ್ಣಗೇ ತನ್ನ ಕಾರ್ಯಸಾಧಿಸುತ್ತಾನೆ. ಅವರನ್ನು ಕೊಲ್ಲುವಾಗಲೂ ಆರ್ಭಟಿಸುವುದಿಲ್ಲ, ಕಾಪಾಡಿದಾಗಲೂ ಅಟ್ಟಹಾಸವಿರುವುದಿಲ್ಲ. ಆದ್ದರಿಂದಲೇ ಶ್ರೀ ಕೃಷ್ಣನು ಲೀಲಾಮಾನುಷರೂಪಿ ಎನ್ನಿಸಿಕೊಳ್ಳುತ್ತಾನೆ, ಅನನುಕರಣೀಯನಾಗುತ್ತಾನೆ.

(ಆ) ಅಕ್ರೂರನ ಹೆಸರು ವಿಚಿತ್ರವಾಗಿದೆ. 'ಅ' ಎಂಬುದು ಒಳಗೇ ಲೀನವಾಗಿ ಕ್ರೂರ ಎಂಬ ಶಬ್ದ ಹೊರಬರುತ್ತದೆ. ಆದರೆ ಅವನ ವ್ಯಕ್ತಿತ್ವನ್ನು ಕಂಸಾದಿಗಳು ಸರಿಯಾಗಿ ತಿಳಿದಿರಲಿಲ್ಲ. ಅನೇಕ ಮಂತ್ರಿಗಳಲ್ಲಿ ಅವನೂ ಒಬ್ಬನೆಂದು ತಿಳಿದಿದ್ದರು. ಆದರೆ ಅವನು ಸಾತ್ವಿಕನೆಂಬುದು ಅವರಿಗೂ ಗೊತ್ತಿತ್ತು. ಆದ್ದರಿಂದಲೇ ಗೋಕುಲದಿಂದ ಕೃಷ್ಣನನ್ನು ಕರೆದು ತರಲು ಅಕ್ರೂರನನ್ನೇ ಕಂಸನು ಕಳುಹಿಸುತ್ತಾನೆ.

ಅಕ್ರೂರನು ತನಗೆ ಸದಾವಕಾಶವು ಒದಗಿದೆ ಎಂದು ಭಾವಿಸುತ್ತಾನೆ. ಕೃಷ್ಣನು ತನ್ನನ್ನು ಪ್ರೀತಿಯಿಂದ ಕಾಣುತ್ತಾನೋ ಅಥವಾ ಇನ್ನೂ ಹೆಚ್ಚಿನ ಆತ್ಮೀಯತೆಯಿಂದ ಮುಟ್ಟಿ ಮಾತನಾಡಿಸುತ್ತಾನೋ ಎಂಬ ಆಲೋಚನೆಯಲ್ಲಿ ಮಗ್ನನಾಗುತ್ತಾನೆ. ಅವನ ಮನಸ್ಸು ಕೃಷ್ಣಧ್ಯಾನದಲ್ಲಿ ಆಸಕ್ತವಾಗುತ್ತದೆ. ಅಕ್ರೂರನ ಭಾವನೆಯಂತೆಯೇ ಕೃಷ್ಣನು ಆತನನ್ನು ಸ್ಪರ್ಶಿಸಿ, ಪ್ರೀತಿಯಿಂದ ಮಾತನಾಡಿಸುತ್ತಾನೆ. ಯಾವ ದಾನದಿಂದ ತಪಸ್ಸಿನಿಂದ ಇಂಥ ಪುಣ್ಯವು ಲಭಿಸುತ್ತದೆ ಎಂದು ಆಶ್ಚರ್ಯಪಡುತ್ತಾನೆ. ಯಶೋದೆಯು ಇನ್ನೆಷ್ಟು ಪುಣ್ಯ ಮಾಡಿದ್ದಳೋ ಎಂದು ಆಶ್ಚರ್ಯವನ್ನು ತಾಳುತ್ತಾನೆ. ಬಿಲ್ಲಹಬ್ಬಕ್ಕೆ ಬಲರಾಮ ಕೃಷ್ಣರನ್ನು ಕರೆಯಲು ಬಂದಿರುವ ವಿಷಯವನ್ನು ತಿಳಿಸುತ್ತಾನೆ. ನಂದ ಮತ್ತು ಯಶೋಧೆಯರು ಕಂಬನಿ ತಂದುಕೊಳ್ಳುತ್ತಾರೆ. ಆಗ ಅಕ್ರೂರನು ಅವರಿಗೆ ಧೈರ್ಯ ಹೇಳುತ್ತಾನೆ. ಶ್ರೀಹರಿಯೇ ಇಲ್ಲಿ ಕೃಷ್ಣನಾಗಿ ಹುಟ್ಟಿದ್ದಾನೆ ಎಂದ ಮೇಲೆ ಬಲರಾಮ ಕೃಷ್ಣರಿಗೆ ಯಾವ ತೊಂದರೆ ಉಂಟಾಗಲು ಸಾಧ್ಯ ಎಂದು ಮಂದಹಾಸದಿಂದ ನುಡಿಯುತ್ತಾನೆ. ದಾರಿಯಲ್ಲಿ ಒಂದು ಕಡೆ ಕೃಷ್ಣನು ಅಕ್ರೂರನಿಗೆ ವಿಶೇಷ ಸ್ವರೂಪವನ್ನು ತೋರಿಸಿ ಅನುಗ್ರಹಿಸುತ್ತಾನೆ. ಅಕ್ರೂರನು ಅವರನ್ನು ಊರಿನ ಹೊರಗೇ ಇಳಿಸಿಬಿಟ್ಟು ಸಾವಧಾನವಾಗಿ ಬನ್ನಿ ಎಂದು ಹೊರಟುಹೋಗುತ್ತಾನೆ. ಆದ್ದರಿಂದಲೇ ಅಕ್ರೂರನನ್ನು ಪುಣ್ಯಶಾಲಿ ಎಂದು ಹೇಳಲಾಗುತ್ತದೆ.

ಇ) ಸತ್ಯಭಾಮೆ ಕೃಷ್ಣನ ಸತಿಯರ ಪೈಕಿ ಅಧಿಕ ಸ್ವಾಭಿಮಾನಿ. ಅವಳು ರಜೋಪ್ರಧಾನವಾದ ಗುಣವುಳ್ಳವಳು. ನಾರದನು ಪಾರಿಜಾತಪುಷ್ಪವನ್ನು ಕೃಷ್ಣನಿಗೆ ಕೊಟ್ಟಾಗ ಕೃಷ್ಣನು ಅದನ್ನು ರುಕ್ಮಿಣಿಗೆ ಮುಡಿಯಲು ಕೊಡುತ್ತಾನೆ. ಸತ್ಯಭಾಮೆಯ ಮನಸ್ಸು ಇದನ್ನು ಕೇಳಿ ಉದ್ವಿಗ್ನವಾಯಿತು; ಮಾತ್ಸರ್ಯವು ಮಿತಿಮೀರಿತು. ಅವಳು ಕೋಪಗೃಹವನ್ನು ಹೊಕ್ಕು ಕಣ್ಣೀರು ಸುರಿಸಲಾರಂಭಿಸಿದಳು. ಕೃಷ್ಣನು ಅವಳನ್ನು ಅನೇಕ ವಿಧದಲ್ಲಿ ಸಮಾಧಾನಪಡಿಸಲು ಯತ್ನಿಸಿದರೂ ಪ್ರಯೋಜನವಾಗಲಿಲ್ಲ 'ಕೃಷ್ಣನ ಅನುನಯದ ಮಾತುಗಳು ಅವಳಲ್ಲಿ ಇನ್ನಷ್ಟು ಕ್ರೋಧವನ್ನೇ ಉಂಟುಮಾಡಿದುವು. ಎಷ್ಟೇ ಕೋಪ ಬಂದರೂ ಅವಳು ಆಡುವ ಮಾತಿನಲ್ಲಿ ಸಂಸ್ಕೃತಿಯ ಸುಗಂಧವಿತ್ತು. ಅವಳು ತಪಸ್ಸಿಗೆ ಹೋಗಲು ಅನುಮತಿ ಕೇಳುತ್ತಾಳೆ ಮತ್ತು ಮುಂದಿನ ಜನ್ಮದಲ್ಲಿ ಕೃಷ್ಣನೇ ಪತಿಯಾಗಲಿ ಎಂದು ಬಯಸುತ್ತಾಳೆ. ಕಡೆಗೆ ಮನನೊಂದ ಕೃಷ್ಣನು ಪಾರಿಜಾತ ಮರವನ್ನೇ ಸತ್ಯಭಾಮೆಯ ಬಿಡಾರದ ಮುಂದೆ ಬೆಳೆಸುತ್ತೇನೆಂದು ಹೇಳಿದ ನಂತರವೇ ಅವಳಿಗೆ ಸಮಾಧಾನ ಉಂಟಾದದ್ದು. ಆದರೆ ಸತ್ಯಭಾಮೆಯನ್ನು ನಿಂದಿಸಿದಾಗ ಸತ್ಯಭಾಮೆಯು ಶಾಂತರೀತಿಯಲ್ಲಿ 'ನನ್ನ ಪತಿಯ ಕೃಪೆಯಿಂದಲೇ ನಿನ್ನ ಪತಿ ಇಂದ್ರಪದವಿಯಲ್ಲಿರುವುದು' ಎಂದು ಹೇಳುತ್ತಾಳೆ. ಶಚಿಯು ಮತ್ತೆ ಟೀಕಿಸಿದರೂ ಸತ್ಯಭಾಮೆಯು ಸಹನೆಯನ್ನು ಕಳೆದುಕೊಳ್ಳುವುದಿಲ್ಲ.

ಈ ಕಾವ್ಯದಲ್ಲಿರುವ ಪಾತ್ರಗಳು ಕವಿಯಿಂದ ಕಲ್ಪಿತವಾದ ಪಾತ್ರಗಳಲ್ಲ. ಆದ್ದರಿಂದ ಕವಿಯು ಸ್ವತಂತ್ರವಾಗಿ ಚಿತ್ರಿಸಲು ಸಾಧ್ಯವಿಲ್ಲ. ಮೂಲದಲ್ಲಿ ಹೇಗೆ ಇದೆಯೋ ಹಾಗೆಯೇ ನಿರೂಪಿಸಬೇಕಾಗುತ್ತದೆ. ವರ್ಣನೆಯಲ್ಲಿ ಮಾತ್ರ ಏನಾದರೂ ಹೆಚ್ಚು ಕಡಿಮೆ ಮಾಡಬಹುದಾಗಿದೆ. ಶಿಶುಪಾಲ, ಜರಾಸಂಧ ಮುಂತಾದವರನ್ನೂ ಬೇರೆ ರೀತಿಯಲ್ಲಿ ಬಿಂಬಿಸುಲಾಗುವುದಿಲ್ಲ. ಈ ಪಾತ್ರಗಳ ಬಗ್ಗೆಯೂ ನೀವು ಚೆನ್ನಾಗಿಯೇ ತಿಳಿದಿದ್ದೀರಿ.

## 2.6.4 ಕೃತಿ ವಿಮರ್ಶೆ

ಕವಿಯು ಯಾವುದೇ ವಸ್ತುವನ್ನು ತೆಗೆದುಕೊಂಡಿರಲಿ ಕೆಲವು ಸನ್ನಿವೇಶಗಳನ್ನು ಸ್ವತಂತ್ರವಾಗಿ ಸೃಷ್ಟಿಸಬಹುದು. ಆದರೆ ಆ ಸನ್ನಿವೇಶಗಳು ಮೂಲ ಕಥೆಯನ್ನು ಬದಲಾಯಿಸುವಂತಿರಬಾರದು. ಸೂಕ್ಷ್ಮವಾದ ವಿಚಾರಗಳನ್ನು ಉಚಿತವಾದ ರೀತಿಯಲ್ಲಿ ಸಮಾವೇಶಗೊಳಿಸಬಹುದು.

### ಅ) ಕೃಷ್ಣನ ಬಾಲಲೀಲೆ

ರುದ್ರಭಟ್ಟನು ಕೃಷ್ಣನ ಬಾಲಲೀಲೆಯನ್ನು ತುಂಬಾ ಸೊಗಸಾಗಿ ವರ್ಣಿಸಿದ್ದಾನೆ. ದೇವಕಿಗೆ ಜನ್ಮ ಕೊಡುವ ಭಾಗ್ಯವನ್ನು ಬಿಟ್ಟರೆ ಉಳಿದಂತೆ ಬಾಲಲೀಲೆಯನ್ನು ಕಂಡು ಆನಂದಿಸುವ ಭಾಗ್ಯವಿರಲಿಲ್ಲ. ಅದು ಯಶೋದೆಯ ಪಾಲಿಗೆ ಲಭಿಸಿತು. ಅದ್ದರಿಂದಲೇ ಯಶೋದೆಯ ಭಾಗ್ಯ ತುಂಬಾ ದೊಡ್ಡದು

ಎಂದು ಕವಿಗಳು, ದಾಸರು ಹಾಡಿ ಹೊಗಳಿದ್ದಾರೆ. ಶಿಶು ಕೃಷ್ಣನು ಏನೇನು ಚೇಷ್ಟೆಗಳನ್ನು ಮಾಡುತ್ತಿದ್ದನೆಂಬುದನ್ನು ಕವಿಯು ವರ್ಣಿಸುತ್ತಾನೆ. 'ಮೊಗವಮಂ ನೋಡುವ, ಲಲ್ಲೆಗೆಯ್ವ, ಮೊಲೆಯುಂಬ, ಅಬ್ಬಬ್ಬ ಜೂಬು ಎಂಬ, ಪರಿತಂದು ಅಪ್ಪಪ್ಪ ಎನುತ್ತ..... ಮುದ್ದುಗಳು ಬೀರುವ' ಕಂದನನ್ನು ನೋಡಿ ನಲಿವ ಹೆಣ್ಣು ಏನು ಪುಣ್ಯವನ್ನು ಮಾಡಿದ್ದಳೋ ಎನ್ನುತ್ತಾನೆ. ತನ್ನ ಹೊಟ್ಟೆಯಲ್ಲಿಯೇ ಮೂರು ಲೋಕಗಳನ್ನೂ ಮಲಗಿಸಿಕೊಂಡು ತೂಗುವ ದೇವನನ್ನು ತೊಟ್ಟಿಲಲ್ಲಿ ಮಲಗಿಸಿ ಜೋಜೋ ಎಂದು ಗೋಪಿಯರು ತೂಗಿದರು ಎಂದು ಕವಿಯು ಹೇಳುತ್ತಾನೆ. ತಪ್ಪು ಹೆಜ್ಜೆಗಳನ್ನು ಹಾಕುವ, ಬೆಣ್ಣೆ ಕದಿಯುವ, ಹಾಲು ಕುಡಿಯದೆ ಹಟಮಾಡುವ ಕೃಷ್ಣನು ಸಾಮಾನ್ಯ ಶಿಶುಗಳ ಹಾಗೆಯೇ ವರ್ತಿಸಿದರೂ ಅದರಲ್ಲಿಯೂ ವಿಶೇಷವಿರುತ್ತದೆ. ಯಶೋದೆಯು ಉಪಾಯದಿಂದ 'ಹಾಲು ಕುಡಿದರೆ ಕೂದಲು ಬೆಳೆಯುತ್ತದೆ' ಎಂದು ಹೇಳಿದಾಗ ಹಾಲು ಕುಡಿದು ಕೃಷ್ಣನು 'ಎಷ್ಟು ಬೆಳೆದಿದೆ ಕೂದಲು ' ಎಂದು ಕೇಳುತ್ತಾನೆ. ಒಮ್ಮೆ ಯಶೋದೆಯು ರಾಮಾಯಣದ ಕಥೆಯನ್ನು ಹೇಳುತ್ತಿರುವಾಗ ಶಿಶು ಕೃಷ್ಣನು ತನ್ಮಯನಾಗಿ ಕೇಳುತ್ತಿರುತ್ತಾನೆ, ಸೀತೆಯನ್ನು ಕದ್ದ ಪ್ರಸಂಗ ಬರುತ್ತಿದ್ದಂತೆಯೇ 'ಹೊಂಕಾರ ಮಾಡಿ ಔಡುಗಚ್ಚಿ ಕಣ್ಣು ಕೆಂಪಾಗಿಸಿ' ನೋಡಿದುದನ್ನು ಕವಿಯು ತುಂಬಾ ಆತ್ಮೀಯವಾಗಿ ವರ್ಣಿಸುತ್ತಾನೆ.

**ಆ) ಆಕ್ರೂರ ಸಂಧಾನ**

ಕಂಸನು ತನ್ನ ಮಂತ್ರಿಗಳಲ್ಲಿ ಒಬ್ಬನಾದ ಅಕ್ರೂರನನ್ನು ಕೃಷ್ಣನನ್ನು ಕರೆದುಕೊಂಡು ಬರುವಂತೆ ಕಳುಹಿಸುತ್ತಾನೆ. ಆಕ್ರೂರನ ಭಕ್ತಿ, ಕರ್ತವ್ಯ ಪ್ರಜ್ಞೆಯನ್ನು ಕವಿಯು ಸುಂದರವಾಗಿ ನಿರೂಪಿಸಿದ್ದಾನೆ. ಕಂಸನಿಗೂ ಆಕ್ರೂರನ ವ್ಯಕ್ತಿತ್ವದ ಅರಿವು ಇದ್ದಿತು. ಇಲ್ಲದಿದ್ದರೆ ಅವನನ್ನೇ ಕಳುಹಿಸುವ ಏರ್ಪಾಡು ಮಾಡುತ್ತಿರಲಿಲ್ಲ. ಅಕ್ರೂರನು ತನ್ನ ಮನಸ್ಸಿನಲ್ಲಿ ಕೃಷ್ಣನ ಬಗ್ಗೆ ಭಾವಿಸಿದ ಭಕ್ತಿಯನ್ನು ಕವಿಯು ಹೀಗೆ ವರ್ಣಿಸುತ್ತಾನೆ. ಕೃಷ್ಣನು ಇದ್ದ ದಿಕ್ಕಿಗೆ ಮುಖ ಮಾಡಿದುದರಿಂದಲೇ ಪಾಪವು ಪರಿಹಾರವಾಯ್ತು. ಮನಸ್ಸು ಅಂತರ್ಮುಖಿಯಾಯಿತು. ಪ್ರಜ್ಞೆ ಊರ್ಧ್ವಮುಖವಾಯಿತು, ಮುಖಕಮಲವು ಆನಂದದಿಂದ ಅರಳಿತು, ಸನಕಾದಿಗಳಿಗೂ ಅಸಾಧ್ಯವಾದುದು ನನಗೆ ಸಾಧ್ಯವಾಯಿತು, ದಿವ್ಯ ಸುದರ್ಶನ ಚಕ್ರವನ್ನು ಹಿಡಿದ ಕೈಯಿಂದ ನನ್ನನ್ನು ಹಿಡಿದು ಎತ್ತುವುದಿಲ್ಲವೇ ಎಂದು ಭಾವಿಸುತ್ತಾನೆ. ಆದರೆ ಅಕ್ರೂರನ ಮನಸ್ಸಿನಲ್ಲಿಯೂ ಒಂದು ಸಂದೇಹ ಮೂಡುತ್ತದೆ. ಕಂಸನ ಅಧೀನದಲ್ಲಿರುವವನೆಂಬ ಭಾವನೆಯಿಂದ ಅವಮಾನ ಮಾಡುತ್ತಾನೆಯೋ, ಭಕ್ತನೆಂದು ಮನ್ನಿಸುತ್ತಾನೆಯೋ ಎಂದು ಚಿಂತಿಸಿ ಕಡೆಗೆ 'ಕೃಷ್ಣನಿಗೆ ತಿಳಿಯದೆ'? ಎಂದು ಸಮಾಧಾನ ಪಟ್ಟುಕೊಳ್ಳುತ್ತಾನೆ ಇಂತಹ ಸಂದೇಹವು ಮೂಡಿತು ಎಂದ ಕವಿ ಹೇಳಿರುವುದು ತುಂಬಾ ಸಹಜವಾಗಿದೆ. ಆದರೆ ಕೃಷ್ಣನು ಅಕ್ರೂರನನ್ನು ತುಂಬಾ ಪ್ರೀತಿಯಿಂದ ಸ್ವಾಗತಿಸುತ್ತಾನೆ. 'ನಿಮ್ಮ ಆಗಮನದಿಂದ ಈ ದಿನ ಸುದಿನವಾಯಿತು' ಎನ್ನುತ್ತಾನೆ. ಅಕ್ರೂರನು ನಂದನ ಭಾಗ್ಯವನ್ನು ಹೊಗಳುತ್ತಾನೆ, ಯಶೋದೆಯ ಭಾಗ್ಯವನ್ನು ಕೊಂಡಾಡುತ್ತಾನೆ. ಅಕ್ರೂರನು ಬಲರಾಮ ಕೃಷ್ಣರೊಡನೆ ಹಿಂದಿರುಗುವಾಗ ಯಮುನೆಯಲ್ಲಿ ಸ್ನಾನ ಮಾಡಲು ಬಯಸುತ್ತಾನೆ. ನದಿಯ ನೀರಿನಲ್ಲಿ ಮುಳುಗಿದಾಗ ಅವನಿಗೆ ವಿಷ್ಣುವಿನ ಪೂರ್ಣಸ್ವರೂಪ ಕಾಣಿಸಿತು.

ಆಶ್ಚರ್ಯದಿಂದ ಎದ್ದು ನೋಡಿದರೆ ಕೃಷ್ಣನು ಅಲ್ಲೇ ಕುಳಿತಿದ್ದನು. ಭಕ್ತನಿಗೆ ಭಗವಂತ ಗೋಚರಿಸುವುದು ಸಹಜ ಕ್ರಿಯೆಯಲ್ಲವೇ ಎಂದು ಕವಿಯು ನುಡಿಯುತ್ತಾನೆ.

**ಇ) ಶಿಶುಪಾಲವಧಾ ಪ್ರಸಂಗ**

ರುದ್ರಭಟ್ಟನು ಈ ಪ್ರಸಂಗವನ್ನು ಬಹಳ ಸ್ವಾರಸ್ಯಪೂರ್ಣವಾಗಿ ಚಿತ್ರಿಸಿದ್ದಾನೆ. ಭೀಷ್ಮನು ಕೃಷ್ಣನ ವಿಶೇಷಣಗಳನ್ನು ಹೀಗೆ ತಿಳಿಸುತ್ತಾನೆ. ಶ್ರುತಿಪತಿಯೂ, ಗೋಪತಿಯೂ, ಲಕ್ಷ್ಮೀಪತಿಯೂ, ಸತ್ವಮಯನೂ ಜಗನ್ಮಯನೂ, ಜ್ಞಾನಮಯನೂ, ಕ್ರತುಪುರುಷನೂ, ಆದಿಪುರುಷನೂ ಆದ ಕೃಷ್ಣನಿಗೆ ಅಗ್ರಪೂಜೆ ಸಲ್ಲಬೇಕು ಎನ್ನುತ್ತಾನೆ. ಇದು ರಾಜಸೂಯಯಾಗವನ್ನು ಧರ್ಮರಾಯನು ಮಾಡಲು ವ್ಯವಸ್ಥೆಯನ್ನು ಮಾಡಿಕೊಂಡಾಗ ನಡೆದದ್ದು ಎಂಬುದು ನಿಮಗೆಲ್ಲರಿಗೂ ತಿಳಿದೇ ಇದೆ. ಆದರೆ ಕವಿಯು

ಹೇಗೆ ವರ್ಣಿಸುತ್ತಿದ್ದಾನೆಂಬುದು ವಿಶೇಷವಾಗಿರುತ್ತದೆ. ಶಿಶುಪಾಲನು ಸಹಜವಾಗಿ ದುಷ್ಟ. ಸಾತ್ವಿಕರನ್ನು ಕಂಡರೆ ಅವನಿಗಾಗದು. ಕೃಷ್ಣನನ್ನು ನಿಂದಿಸಲು ಪ್ರಾರಂಭಿಸುತ್ತಾನೆ. ನವನೀತ ಚೋರ, ಗೋಪೀಯುವತಿಜನಚಾರ, ಅಬುಧನ್, ಅಕುಲೀನಂ, ಇತ್ಯಾದಿ ಬೈಗುಳಗಳನ್ನು ಜೋಡಿಸುತ್ತಾನೆ. ಸಹದೇವನು ಅಗ್ರಪೂಜೆಯನು ಅರ್ಪಿಸುವುದನ್ನು ಕಂಡಾಗ ಶಿಶುಪಾಲನ ಕೋಪ ನೆತ್ತಿಗೇರುತ್ತದೆ. ಕೃಷ್ಣನನ್ನು ಇನ್ನಷ್ಟು ಬೈಯಲು ಪ್ರಾರಂಭಿಸುತ್ತಾನೆ. 'ನೀನು ಮೀನಾಗಿದ್ದಂದು ನಾನಿದ್ದಿದ್ದರೆ ಗಾಳ ಹಾಕಿ ಹಿಡಿದು ಅಡುಗೆ ಮಾಡಿಸುತ್ತಿದ್ದೆ, ಹಂದಿಯಾಗಿದ್ದಾಗ ನಾನಿದ್ದಿದ್ದರೆ ನಿನ್ನನ್ನು ಬೇಟೆಯಾಡಿ ಸಂಬಾರವನ್ನು ಅರೆಯಿಸುತ್ತಿದ್ದೆ, ನಾಟಕದ ನಟರಂತೆ ಸಿಂಹದ ತಲೆಯನ್ನು ಧರಿಸಿದ್ದೆ, ನೀರು ಹಾವೊಂದನ್ನು ಹಿಡಿದೆ, ಇತ್ಯಾದಿ ಒಂದೊಂದು ಅವತಾರವನ್ನೂ ಬಿಡದೆ ಅಪಹಾಸ್ಯಮಾಡುತ್ತಾನೆ. ಕೃಷ್ಣನು ಕಡೆಗೆ ಅಗ್ರಪೂಜೆಯ ತಟ್ಟೆಯನ್ನೇ ಚಕ್ರದ ಹಾಗೆ ಪ್ರಯೋಗಿಸಿ ಅವನನ್ನು ಕೊಲ್ಲುತ್ತಾನೆ.

## ಭಾಷೆ ಮತ್ತು ಶೈಲಿ

### ಭಾಷೆ

ರುದ್ರಭಟ್ಟನು ಸಂಸ್ಕೃತ ಮತ್ತು ಕನ್ನಡ ಭಾಷೆ, ಸಾಹಿತ್ಯಗಳಲ್ಲಿ ಪಂಡಿತನಾಗಿದ್ದನು. ಅವನು ಕಾವ್ಯಭಾಷೆಯನ್ನು ಕನ್ನಡ ಶಬ್ದಗಳಿಗೆ ಮಾತ್ರ ಸೀಮಿತಗೊಳಿಸಿಕೊಂಡಿಲ್ಲ. ಅವನು ಸಂದರ್ಭೋಚಿತವಾಗಿ ಕನ್ನಡ, ಸಂಸ್ಕೃತ ಶಬ್ದಗಳನ್ನು ಬಳಸಿದ್ದಾನೆ. ಚಂಪೂಕಾವ್ಯಗಳಲ್ಲಿ ಗದ್ಯದ ಭಾಗಗಳೂ ಬರುತ್ತವೆ ಎಂಬುದನ್ನು ಕೇಳಿದ್ದೀರಿ. ಇಂತಹ ಗದ್ಯಭಾಗಗಳು ಸಂಸ್ಕೃತ ಭೂಯಿಷ್ಠವಾಗಿರುವುದನ್ನು ಕಾಣುತ್ತೇವೆ. ರುದ್ರಭಟ್ಟನಿಗೆ ಪ್ರಾಸಾನುಪ್ರಾಸಗಳಲ್ಲಿ ಒಲವು ಇದೆ. ಶಬ್ದಾಲಂಕಾರಗಳನ್ನೂ ಯಥೇಚ್ಛವಾಗಿ ಬಳಸುತ್ತಾನೆ.

### ಶೈಲಿ

ರುದ್ರಭಟ್ಟನದು ಸಂಸ್ಕೃತ ಮಿಶ್ರಿತವಾದ ಕನ್ನಡ ಶೈಲಿ ಎನ್ನಬಹುದು. ಒಟ್ಟು ದೃಷ್ಟಿಯಿಂದ ಹೇಳುವುದಾದರೆ ಈ ಕವಿಯ ಶೈಲಿಯು ಬಹಳ ಪ್ರೌಢವಾದುದು. ದೀರ್ಘವಾದ ಸಮಾಸಗಳು, ಅಪೂರ್ವವಾದ ಸಂಸ್ಕೃತ ಶಬ್ದಗಳು ಹೇರಳವಾಗಿವೆ. ಹದಿನೆಂಟು ವರ್ಣನೆಗಳನ್ನು ತರಬೇಕೆಂಬುದು ಆತನ ಅಪೇಕ್ಷೆಯಾಗಿದೆ. ಆತನು ಮನಸ್ಸು ಮಾಡಿದರೆ ಅಚ್ಚಗನ್ನಡದಲ್ಲಿ ಬರೆಯಬಲ್ಲನೆಂಬುದಕ್ಕೆ ನಿದರ್ಶನಗಳೂ ಇವೆ. ಭಾಗವತ ದೃಷ್ಟಿ, ಉಪನಿಷತ್ತುಗಳ ದರ್ಶನ ಆತನ ಕಾವ್ಯದಲ್ಲಿ ಕಂಡು ಬರುತ್ತದೆ. ಜಗನ್ನಾಥವಿಜಯದಲ್ಲಿ ಸುಭಾಷಿತಗಳು, ಗಾದೆಯ ಮಾತುಗಳೂ ಇದೆ 'ಕಂದನೊಳ್ ನಲಿವ ಪೆಣ್ಣೇಂ ನೋಂಪಿಯಂ ನೋಂತಳೊ' 'ಮಾನಿನಿಗೆ ಮಾನಭಂಗಂ ತಾನದು ಮರಣಕ್ಕಮಧಿಕಂ' 'ಬಯಕೆಗೆ ಬಡವರಿಲ್ಲ' 'ಬುದ್ಧಿ ಕಿಡುಗುಂ ಕೇಡೆಯ್ದೆವಂದಾರೊಳಂ' ಇತ್ಯಾದಿ ಈ ಕಾವ್ಯದಲ್ಲಿ ಕಂದಪದ್ಯಗಳ ರಚನಾಕ್ಷಮತ್ವವು ಆಕರ್ಷಕವಾಗಿವೆ. ಕಂದಪದ್ಯಗಳಲ್ಲೇ ಇಡೀ ಕಾವ್ಯವನ್ನು ಬರೆದಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು ಎಂಬ ಭಾವನೆಯೂ ಮೂಡುತ್ತದೆ. ಆದರೆ ಯುದ್ಧವರ್ಣನೆಗೆ ಓಜಸ್ಸಿನಿಂದ ಕೂಡಿದ ಶೈಲಿಬೇಕಾಗುತ್ತದೆ. ಅದಕ್ಕೆ ವೃತ್ತಗಳೂ ಅನಿವಾರ್ಯವಾಗುತ್ತದೆ.

ಒಟ್ಟಾರೆ ರುದ್ರಭಟ್ಟನ ಶೈಲಿ ತೀರಾ ಸರಳವಾದುದಲ್ಲ; ಪ್ರೌಢವಾದುದು ಎಂದು ಹೇಳಬಹುದು.

## ಕೃತಿ ಮಹತ್ವ

ವಿಷ್ಣುಪುರಾಣದಲ್ಲಿದ್ದ ಕೃಷ್ಣಕಥೆಯನ್ನು ತೆಗೆದುಕೊಂಡು ಉತ್ತಮ ಕಾವ್ಯವನ್ನಾಗಿ ಮಾಡಿರುವುದನ್ನು ನಾವು ಇಲ್ಲಿ ಕಾಣುತ್ತೇವೆ. ಮೂಲದಲ್ಲಿ ಪೌರಾಣಿಕ ದೃಷ್ಟಿಯಿಂದ ವಿಷಯ ನಿರೂಪಣೆ ಮಾಡಿದಂತೆ ಮಾಡಲಾಗಿದೆ. ರಸಭಾವಗಳನ್ನು ಕಸಿ ಮಾಡುವ ದೃಷ್ಟಿ ಪುರಾಣಕಾರರಿಗಿರುವುದಿಲ್ಲ. ಜಗನ್ನಾಥ ವಿಜಯವು ಪುರಾಣದ ಕಥೆಯನ್ನು ರೂಪಪರಾವರ್ತನ ಕ್ರಿಯೆಗೆ ಗುರಿಮಾಡಿದೆ. ಉದಾಹರಣೆಗೆ ನೀವು ಎಷ್ಟೋಂದು ಕಂಬಳಿ ಹುಳುಗಳನ್ನು ನೋಡಿದ್ದೀರಿ. ಅವುಗಳು ಅಷ್ಟು ಆಕರ್ಷಕವಾಗಿ ಕಾಣುವುದಿಲ್ಲ. ಆಕರ್ಷಕವಿರಲಿ ಸದ್ಯ, ಭಯಪಡಿಸದಿದ್ದರೆ ಸಾಕು. ಅವು ನಿಧಾನವಾಗಿ ತೆವಳುತ್ತವೆ. ಆದರೆ ಅದೇ

ಕಂಬಳಿ ಹುಳು ಚಿಟ್ಟೆಯಾದಾಗ ಬಣ್ಣದ ಚಿಟ್ಟೆಯಾಗಿ ಹಾರಾಡುವಾಗ ಎಷ್ಟು ಸುಂದರವಾಗಿ ಕಾಣುತ್ತವೆ. ಹಾಗೆಯೇ ಇಲ್ಲಿಯೂ ಕೂಡ. ಪುರಾಣದ ಕಥೆ ತೆವಳುತ್ತಿದ್ದರೆ, ಕಾವ್ಯವು ಬಣ್ಣದ ಚಿಟ್ಟೆಯಂತೆ ವರ್ಣರಂಜಿತವಾಗಿ ಹಾರಾಡುತ್ತದೆ. ನೋಡಿದವರು ಸಂತೋಷಗೊಳ್ಳುತ್ತಾರೆ. ಒಂದೊಂದು ಸನ್ನಿವೇಶವೂ ರಸಸ್ಯಂದಿಯಾಗಿ ಪ್ರತ್ಯೇಕ ಖಂಡಕಾವ್ಯಗಳಾಗುವ ಸತ್ವವನ್ನು ಹೊಂದಿವೆ.

## 2.7 ಜನ್ನ : ಕಾಲ, ದೇಶ, ಕೃತಿ ವಿಚಾರ

### 2.7.1 ಕಾಲ

ಜನ್ನ ಎಂಬುದು ಜನಾರ್ದನ ಎಂಬ ಹೆಸರಿನ ಚಿಕ್ಕರೂಪ. ಹೀಗೆ ಹೆಸರುಗಳನ್ನು ಚಿಕ್ಕದು ಮಾಡಿ ಕರೆಯುವುದು ರೂಢಿ ತಾನೆ. ಈ ಕವಿಯು ಹೊಯ್ಸಳ ರಾಜ ನರಸಿಂಹ ಬಲ್ಲಾಳನ ಕಟಿಕೋಪಧ್ಯಾಯ ನಾಗಿದ್ದನು. ಅವನು ತನ್ನ ಹುಟ್ಟಿದ ಇಸವಿಯನ್ನು ಹೇಳದೇ ಇದ್ದರೂ ಕೃತಿಗಳ ರಚನೆಯ ಕಾಲವನ್ನು ಹೇಳಿದ್ದಾನೆ. ಯಶೋಧರ ಚರಿತೆಯನ್ನು ಕ್ರಿ.ಶ. ೧೨೦೯ರಲ್ಲಿ ಬರೆದೆನೆಂದೂ 'ಅನಂತನಾಥ ಪುರಾಣ'ವನ್ನು ಕ್ರಿ.ಶ. ೧೨೩೦ರಲ್ಲಿ ಬರೆದುದಾಗಿಯೂ ಹೇಳಿದ್ದಾನೆ. ಆದ್ದರಿಂದ ಜನ್ನನ ಕಾಲವನ್ನು ಕ್ರಿ.ಶ. ೧೧೭೦-೧೨೩೫ರರ ಮಧ್ಯದ ಅವಧಿಯೆಂದು ಹೇಳಬಹುದು.

### 2.7.2 ದೇಶ

ಜನ್ನನ ದೇಶ ಅಂದರೆ ಸ್ಥಳ ಯಾವುದೆಂದು ಖಚಿತವಾಗಿ ತಿಳಿದುಬಂದಿಲ್ಲ. ಹೊಯ್ಸಳರಾಜ ನರಸಿಂಹ ಬಲ್ಲಾಳನ ಆಸ್ಥಾನ ಕವಿಯಾಗಿದ್ದುದೇ ಅಲ್ಲದೆ ಮಂತ್ರಿಯೂ ಆಗಿದ್ದನು. ಪಂಪನ ಹಾಗೆ ಜನ್ನನು ಕವಿಯೂ ಕಲಿಯೂ ಆಗಿದ್ದನು, 'ಓಲಗದೊಳ್ ನಿಂದಿರೆ ದಂಢಾಧೀಶಂ, ಕುಳ್ಳಿರೆ ಮಂತ್ರಿ, ತೊಡಂಕೆ ಕವಿ' ಎಂದು ಹೇಳಿಕೊಂಡಿದ್ದಾನೆ. ಅವನಿಗೆ ಕವಿ ಚಕ್ರವರ್ತಿ ಎಂಬ ಬಿರುದೂ ಇತ್ತು. ಅವನು ಬರೆದಿರುವ ಶಾಸನಗಳು ಚನ್ನರಾಯನಪಟ್ಟಣದ ಮತ್ತು ತರೀಕೆರೆಯ ಸುತ್ತಮುತ್ತ ಸಿಕ್ಕಿವೆ. ಆದ್ದರಿಂದ ಜನ್ನನು ಹಳೆಯಬೀಡು ಅಥವಾ ಅದರ ಹತ್ತಿರದ ಊರಿನಲ್ಲಿ ಹುಟ್ಟಿ ಬೆಳೆದಿರಬೇಕು. ರಾಜ ವೀರಬಲ್ಲಾಳನು ಜನ್ನನಿಗೆ ಕವಿಚಕ್ರವರ್ತಿ ಎಂಬ ಬಿರುದನ್ನು ನೀಡಿರಬಹುದು.

### 2.7.3 ಕೃತಿಗಳು

ಜನ್ನನು 'ಯಶೋಧರ ಚರಿತೆ' ಮತ್ತು 'ಅನಂತನಾಥ ಪುರಾಣ' ಎಂಬ ಕಾವ್ಯಗಳ ಜೊತೆಗೆ 'ಅನುಭವ ಮುಕುರ' ಎಂಬ ಚಿಕ್ಕ ಕೃತಿಯನ್ನೂ ನಾಲ್ಕು ಶಾಸನಗಳನ್ನೂ ಬರೆದಿದ್ದಾನೆ. ಈ ಕವಿಯ ಎರಡು ಕಾವ್ಯಗಳೂ ಧಾರ್ಮಿಕ ಕೃತಿಗಳೇ ಆಗಿವೆ.

**ಆಕರ**

ಯಶೋಧರನ ಕಥೆಯನ್ನು ಕುರಿತ ಕೃತಿಗಳು ಜನ್ನನಿಗಿಂತ ಬಹಳ ಹಿಂದೆಯೇ ಸಿಗುತ್ತವೆ. ಅವುಗಳು ಸಂಸ್ಕೃತ, ಪ್ರಾಕೃತ, ಅಪಭ್ರಂಶ ಭಾಷೆಗಳಲ್ಲಿವೆ. ಆದರೆ ಜನ್ನನಿಗೆ ಆಕರವಾದುದೆಂದರೆ ವಾದಿರಾಜನ ಸಂಸ್ಕೃತ ಕಾವ್ಯವಾದ 'ಯಶೋಧರ ಚರಿತಂ' ಎಂಬುದು. ವಾದಿರಾಜನು ತನ್ನ ಕಾವ್ಯವನ್ನು ನಾಲ್ಕು ಸರ್ಗಗಳನ್ನಾಗಿ ವಿಂಗಡಿಸಿದ್ದರೆ, ಜನ್ನನು ತನ್ನ ಕೃತಿಯನ್ನು ನಾಲ್ಕು ಅವತಾರಗಳಾಗಿ ವಿಂಗಡಿಸಿದ್ದಾನೆ. ವಾದಿರಾಜನ ಕಾವ್ಯದ ಪ್ರತಿಯೊಂದು ಪದ್ಯವನ್ನೂ ತೆಗೆದುಕೊಂಡು ಅದನ್ನು ಇನ್ನೂ ಉತ್ತಮಪಡಿಸಿ ಬರೆದಿದ್ದಾನೆ. ಕೆಲವು ಕಡೆ ಸಂಕ್ಷಿಪ್ತಗೊಳಿಸಿದ್ದಾನೆ. ಕೆಲವು ಕಡೆ ಹೊಸದಾಗಿ ಸೇರಿಸಿದ್ದಾನೆ. ಜನ್ನನ ಕಾವ್ಯವು ವಾದಿರಾಜನ ಕಾವ್ಯದ ನೇರವಾದ ಶಬ್ದಶಃ ಅನುವಾದವೆಂದು ಹೇಳಲಾಗುವುದಿಲ್ಲ. ಜನ್ನನು ವಾದಿರಾಜನ ಕಾವ್ಯವನ್ನು ಕನ್ನಡದಲ್ಲಿ ಪುನರ್ ಸೃಷ್ಟಿಸಿದ್ದಾನೆಂದು ಹೇಳಬಹುದು.

**ಕಥಾವಸ್ತು**

ರಾಮಾಯಣ, ಮಹಾಭಾರತ ಕಥೆಗಳಾದರೆ ನಿಮಗೆಲ್ಲರಿಗೂ ಗೊತ್ತಿರುತ್ತದೆ. ಉಳಿದ ಕಾವ್ಯಗಳ ಕಥಾಭಾಗ ಎಲ್ಲರಿಗೂ ತಿಳಿದಿರುವುದಿಲ್ಲ. ಆದ್ದರಿಂದ ಇಲ್ಲಿ ಯಶೋಧರ ಚರಿತೆಯ ಕಥಾಭಾಗವನ್ನು ಸಂಕ್ಷಿಪ್ತವಾಗಿ ನೋಡೋಣ. ಒಂದು ಅಂಶವನ್ನು ಇಲ್ಲಿ ಗಮನಿಸಬೇಕು, ಏನೆಂದರೆ ಕಥೆಯ ಕಡೆಯಲ್ಲಿ ನಡೆಯುವ ಘಟನೆಯನ್ನು ಕಾವ್ಯದ ಪ್ರಾರಂಭದಲ್ಲಿಯೇ ಹೇಳಿ, ಪ್ರಾಸಂಗಿಕವಾಗಿ ಹಿಂದಕ್ಕೆ ಹೋಗಿ ಕಾಲಕ್ರಮಬದ್ಧವಾದ ರೀತಿಯಲ್ಲಿ ಕಥೆಯನ್ನು ಬೆಳೆಸಲಾಗಿದೆ. ಇದಕ್ಕೆ ಹಿನ್ನೋಟ ತಂತ್ರವೆನ್ನುತ್ತಾರೆ. (ಇಂಗ್ಲೀಷಿನಲ್ಲಿ 'ಫ್ಲಾಷ್ ಬ್ಯಾಕ್' ತಂತ್ರ) ಕಾವ್ಯದಲ್ಲಿ ಬಂದಿರುವ ಕ್ರಮದಲ್ಲಿಯೇ ನೋಡೋಣ.

ಮಾರಿದತ್ತ ರಾಜಪುರದ ರಾಜ. ಊರಿನಲ್ಲಿ ಚಂಡಮಾರಿಯ ಗುಡಿ ಇತ್ತು. ಆದೇವತೆಗೆ ಪ್ರಾಣಿಬಲಿಯ ಜೊತೆಗೆ ನರಬಲಿ ಕೊಡುವ ಸಂಪ್ರದಾಯವಿತ್ತು. ಚಂಡಕರ್ಮ ಎಂಬ ಸೇವಕ ಅಣ್ಣ - ತಂಗಿಯರಾದ ಚಿಕ್ಕ ಬಾಲಕ ಬಾಲಕಿಯರನ್ನು ಹಿಡಿದು ತಂದ. ಅಣ್ಣನ ಹೆಸರು ಅಭಯರುಚಿ, ತಂಗಿ ಅಭಯಮತಿ (ಹೆಸರಿನಲ್ಲಿರುವ 'ಅಭಯವ'ವನ್ನು ಗಮನಿಸಿ) ಅವರಿಬ್ಬರೂ ನಿರ್ಭಯರಾಗಿದ್ದುದನ್ನು ನೋಡಿ ಮಾರಿದತ್ತ ಆಶ್ಚರ್ಯಪಟ್ಟು ಅವರ ವೃತ್ತಾಂತವನ್ನು ತಿಳಿಯಬಯಸುತ್ತಾನೆ. ಇದು ಒಂದು ಘಟ್ಟ. ಇಲ್ಲಿಂದ ಮುಂದಕ್ಕೆ ಕಥೆಯ ನಿಜವಾದ ಕಾಲಾನುಸಾರಿ ನಿರೂಪಣೆಯು ಪ್ರಾರಂಭವಾಗುತ್ತದೆ.

ಯಶೋಧರ ಉಜ್ಜಯಿನಿಯ ರಾಜ. ಆತನ ರಾಣಿಯ ಹೆಸರು ಅಮೃತಮತಿ ಮತ್ತು ಆತನ ತಾಯಿಯ ಹೆಸರು ಚಂದ್ರಮತಿ. ಅಷ್ಟಾವಂಕ ಎಂಬಾತನು ಪಟ್ಟದಾನೆಯ ಮಾವಟಿಗ. ಅಮೃತಮತಿಯು ಅವನ ಹಾಡಿಗೆ ಮನ ಸೋಲುತ್ತಾಳೆ. ಅವಳ ಗೆಳತಿಯರು ಅಷ್ಟಾವಂಕನ ಕುರೂಪವನ್ನು ವರ್ಣಿಸಿದರೂ ಅವನನ್ನು ಕೂಡಿ ರಮಿಸುತ್ತಿರುತ್ತಾಳೆ.

ಯಶೋಧರನಿಗೆ ಸಂದೇಹ ಬಂದು ಒಮ್ಮೆ ಅವಳನ್ನು ಹಿಂಬಾಲಿಸಿ ಹೋಗಿ ಸತ್ಯವನ್ನು ತಿಳಿದು, ಇಬ್ಬರನ್ನೂ ಕೊಲ್ಲಲು ಬಯಸಿ, ಮರುಗಳಿಗೆಯೇ ಸಂಯಮ ತಂದುಕೊಂಡು ಹಿಂದಿರುಗುತ್ತಾನೆ. ಬೆಳಗಾದ ನಂತರ ಅವನು ಹೆಂಡತಿಯೊಡನೆ ಆಡಿದ ಮಾತುಗಳಲ್ಲಿದ್ದ ವ್ಯಂಗ್ಯವನ್ನು ಅರಿತು, ಅಮೃತಮತಿಯು ತನ್ನ ರಹಸ್ಯ ಬಯಲಾಗಿದೆಯೆಂದು ತಿಳಿಯುತ್ತಾಳೆ.

ಚಂದ್ರಮತಿಯು ಮಗನ ಮುಖವು ಮಂಕಾಗಿರುವುದನ್ನು ಗಮನಿಸಿ ಕೇಳಿದಾಗ ಅವನು ದುಃಸ್ವಪ್ನವನ್ನು ಕಂಡೆನೆಂದು ಹೇಳುತ್ತಾನೆ. ಅವಳು ಕುರಿಯನ್ನು ಬಲಿಕೊಡಬೇಕೆಂದು ಬಯಸಿದಾಗ ಯಶೋಧರ ವಿರೋಧಿಸಿದುದರಿಂದ ಕಡೆಗೆ ಹಿಟ್ಟಿನಿಂದ ಮಾಡಿದ ಕೋಳಿಯನ್ನು ಬಲಿಕೊಡಲು ತೀರ್ಮಾನಿಸುತ್ತಾನೆ. ಹಿಟ್ಟಿನ ಕೋಳಿಯ ಕಲಾತ್ಮಕತೆಗೆ ಬೆರಗಾದ ಬೆಂತರವೊಂದು (ದೆವ್ವ) ಅದರೊಳಕ್ಕೆ ಸೇರಿಕೊಳ್ಳುತ್ತದೆ ಮತ್ತು ಬಲಿಕೊಟ್ಟಾಗ ಕಿರುಚಿ ನೆಗೆಯುತ್ತದೆ. ಆ ಸದ್ದಿಗೆ ತಾಯಿ, ಮಗ ಇಬ್ಬರೂ ಬೆಚ್ಚುತ್ತಾರೆ. ಯಶೋಧರನು ಮಗನಿಗೆ ರಾಜ್ಯಭಾರವನ್ನುವಹಿಸಿ ತಪಸ್ಸಿಗೆ ಹೋಗಲು ನಿರ್ಧರಿಸುತ್ತಾನೆ. ಗಂಡನಿಗೆ ತನ್ನ ಬಗ್ಗೆ ಸಂದೇಹ ಬಂದಿದೆಯೆಂದು ತರ್ಕಿಸಿದ ಅಮೃತಮತಿಯು ಯಶೋಧರನಿಗೆ ಮತ್ತು ಚಂದ್ರಮತಿಗೆ ವಿಷದ ಲಡ್ಡುಗಳನ್ನು ಬಡಿಸಿ ಕೊಂದು ಹಾಕುತ್ತಾಳೆ.

ಹೀಗೆ ದುರ್ಮರಣಕ್ಕೆ ಗುರಿಯಾದ ಯಶೋಧರ, ಚಂದ್ರಮತಿ ಇಬ್ಬರೂ ಆರು ಪ್ರಾಣಿ ಜನ್ಮಗಳನ್ನು ಎತ್ತುತ್ತಾರೆ. ಹಿಟ್ಟಿನ ಕೋಳಿಯನ್ನು ಬಲಿ ಕೊಟ್ಟ ಕಾರಣದಿಂದ ಅವರಿಬ್ಬರೂ ಇಂತಹ ಪಾಡುಪಡಬೇಕಾಯಿತು.

ಯಶೋಧರ ಚಂದ್ರಮತಿಯರು (1) ನವಿಲು -ನಾಯಿ, (2) ಹಂದಿ - ಹಾವು(3)ಮೀನು - ಮೊಸಳೆ, (4)ಹೋತ -ಆಡು (5) ಹೋತ -ಕೋಣ, (6) ಕೋಳಿ ಪಿಳ್ಳೆಗಳು - ಇಷ್ಟು ಜನ್ಮಗಳನ್ನು ಎತ್ತಿದ ಬಳಿಕ ಏಳನೇ ಜನ್ಮದಲ್ಲಿ ಅವಳಿ ಮಕ್ಕಳಾಗಿ ಹುಟ್ಟಿ ಅಭಯರುಚಿ ಮತ್ತು ಅಭಯಮತಿಯರಾಗಿ ಬೆಳೆದು ಚಿಕ್ಕ ವಯಸ್ಸಿನಲ್ಲೇ ಜೈನ ಮುನಿಯ ಬಳಿ ಶಿಷ್ಯ ವೃತ್ತಿಯನ್ನು ಕೈಗೊಳ್ಳುತ್ತಾರೆ.

ಇದಿಷ್ಟು ಈ ಕಾವ್ಯದ ಕಥಾ ಭಾಗ ; ಸ್ಥೂಲವಾದ ನಿರೂಪಣೆ

## ಪಾತ್ರ ಪರಿಚಯ

ಒಂದು ಕಾವ್ಯದ ಎಲ್ಲ ಪಾತ್ರಗಳನ್ನು ಇಲ್ಲಿ ವಿವರಿಸಲು ಸಾಧ್ಯವಿಲ್ಲ. ಕೆಲವು ಮುಖ್ಯ ಪಾತ್ರಗಳನ್ನು ಮಾತ್ರ ಅದೂ ವಿಹಂಗಮ ನೋಟ ಎಂಬಂತೆ ನೋಡಬಹುದು. ಇಲ್ಲಿ ಯಶೋಧರ, ಅಮೃತಮತಿ, ಅಭಯರುಚಿ ಅಭಯಮತಿ ಮುಂತಾದ ಪಾತ್ರಗಳ ಪರಿಚಯ ಮಾಡಿಕೊಳ್ಳೇಣ. ಈ ಪರಿಚಯ ಹೇಗೆ ಮಾಡಿಕೊಳ್ಳುವುದು ಹೇಳಿ ಅವರು ಏನು ಮಾಡುತ್ತಾರೆ, ಹೇಗೆ ಮಾತನಾಡುತ್ತಾರೆ, ಇತರರು ಅವರ ಬಗ್ಗೆ ಏನು ಹೇಳುತ್ತಾರೆ ಮುಂತಾದುವನ್ನು ನೋಡಿ ತಾನೇ ಒಂದು ತೀರ್ಮಾನಕ್ಕೆ ಬರುವುದು. ಈಗ ಅದನ್ನು ನೋಡೋಣ.

### ಅ) ಯಶೋಧರ

ಇವನು ಉಜ್ಜಯಿನಿಯ ರಾಜ, ಧರ್ಮಪರ, ಪರಾಕ್ರಮಿ, ಮಿಗಿಲಾಗಿ ಸುಸಂಸ್ಕೃತ. ಅವನ ಪತ್ನಿ ಅಮೃತಮತಿ. ಅವಳಲ್ಲಿ ಸೌಂದರ್ಯಕ್ಕೆ ಕೊರತೆಯೇನೂ ಇರಲಿಲ್ಲ. ಆದರೆ ಸೌಶೀಲ್ಯಕ್ಕೆ ಕೊರತೆ ಉಂಟಾಯಿತು. ಅಷ್ಟಾವಂಕನೆಂಬ ಮಾವುತನೊಡನೆ ರಮಿಸಲು ಮನಸ್ಸು ಮಾಡಿ ಯಶೋಧರನನ್ನು ಕಡೆಗಣಿಸುತ್ತಾಳೆ. ಅವನು ಪತ್ನಿಯನ್ನು ಪರೀಕ್ಷಿಸಲು ಮನಸ್ಸು ಮಾಡಿ, ಅವಳ ಅಪರಾಧವನ್ನು ಕಂಡುಹಿಡಿದರೂ ಶಿಕ್ಷಿಸದೆ ಹಿಂದಕ್ಕೆ ಬರುತ್ತಾನೆ. ಅವನು ವೀರಯೋಧ, ಕೊಲೆಗೆ ಅಂಜುವವನಲ್ಲ. ಆ ಸಮಯದಲ್ಲಿ ಬಂದ ಕೋಪವೇನೂ ಕಡಿಮೆಯಲ್ಲ ಆದರೂ ಅವರನ್ನು ಕೊಲ್ಲದೆ ಸಂಯಮಕ್ಕೆ ಶರಣಾದುದು ಅವನ ದೊಡ್ಡ ಗುಣವನ್ನು ತೋರಿಸುತ್ತದೆ. ಕ್ಷುದ್ರ ವ್ಯಕ್ತಿಗಳನ್ನು ಕೊಂದು ನರಕಕ್ಕೆ ಹೋಗುವುದಕ್ಕಿಂತ ತಪಸ್ಸಿಗೆ ಹೋಗುವುದು ಅತ್ಯಂತ ಶ್ರೇಯಸ್ಕರವಾದುದೆಂದು ಭಾವಿಸುತ್ತಾನೆ. ಅಮೃತಮತಿಯ ಕುಕೃತ್ಯವನ್ನು ಸಾಂಕೇತಿಕವಾಗಿ ತಿಳಿಸುವ ಸೌಜನ್ಯವಂತನಾಗಿದ್ದಾನೆ. ತಾಯಿಯು ಬಲಿಕೊಡುವ ವಿಚಾರವನ್ನು ಸೂಚಿಸಿದಾಗ ಅವಳ ಹಟಕ್ಕೆ ಮಣಿದು ಹಿಟ್ಟಿನ ಕೋಳಿಯನ್ನು ಬಲಿಕೊಡಲು ಒಪ್ಪುತ್ತಾನೆ. ಜೈನಮತದ ತತ್ತ್ವದಂತೆ ಬಲಿಕೊಡುವ ಸಂಕಲ್ಪವೇ ಪಾಪವೆನ್ನಿಸಿಕೊಳ್ಳುತ್ತದೆ. ಬೇತಾಳವೊಂದು ಹಿಟ್ಟಿನ ಕೋಳಿಯೊಳಗಿಂದ ಹೊರಕ್ಕೆ ನೆಗೆದು ಕೂಗಿ ಓಡಿಹೋದುದು ಮುಂದಿನ ಕಷ್ಟಗಳಿಗೆ ಸೂಚನೆಯಾಯಿತು. ಅಮೃತಮತಿಯಿಂದಾಗಿ ಕೆಟ್ಟೆ, ಚಂದ್ರಮತಿಯಿಂದಾಗಿ ಕೆಟ್ಟೆ ಎಂದು ನಿಂದಿಸಿಕೊಳ್ಳುತ್ತಾನೆ. ತನಗೆ ದ್ರೋಹವನ್ನು ಮಾಡಿದ ಹೆಂಡತಿ ಊಟಕ್ಕೆ ಬಲವಂತವಾಗಿ ಕರೆದಾಗ ಹಿಂದುಮುಂದು ನೋಡದೆ ಹೋಗುತ್ತಾನೆ. ಅವನು ಕೊಂಚ ಸಂದೇಹಪಟ್ಟಿದ್ದರೆ ದುರ್ಮರಣ ಉಂಟಾಗುತ್ತಿರಲಿಲ್ಲ. ಅವನು ತಪಸ್ಸು ಮಾಡಿ ಸಮಾಧಿ ಮರಣವನ್ನು ಪಡೆಯುವ ಸದವಕಾಶವೂ ತಪ್ಪಿಹೋಯಿತು. ಆರು ತಿರ್ಯಕ್ ಜನ್ಮಗಳನ್ನು ಎತ್ತಬೇಕಾಯಿತು. ಅವನು ನವಿಲು, ಹಂದಿ, ಮೀನು, ಹೋತ, ಕೋಣ, ಕೋಳಿಮರಿ ಇಷ್ಟು ಜನ್ಮಗಳನ್ನು ಎತ್ತಿ ಪ್ರತಿಸಲವೂ ದುರ್ಮರಣಕ್ಕೆ ಗುರಿಯಾಗಿ ಏಳನೆಯ ಜನ್ಮದಲ್ಲಿ ಮನುಷ್ಯ ಜನ್ಮ ಲಭಿಸುತ್ತದೆ. ಅವನೇ ಅಭಯರುಚಿಯಾಗಿ ತನ್ನ ಮಗನ ಮಗನಾಗಿ ಹುಟ್ಟುತ್ತಾನೆ.

ಯಶೋಧರನು ಹಂದಿ ಮತ್ತು ಹೋತ ಆಗಿದ್ದಾಗ ಅವನಿಗೆ ಹಿಂದಿನ ಜನ್ಮದ ಸ್ಮರಣೆ ಉಂಟಾಗುವುದಿಲ್ಲ. ನವಿಲು, ಮೀನು, ಹೋತ (ಒನೇ) ಕೋಳಿ ಆಗಿದ್ದಾಗ ಮಾತ್ರ ಹಿಂದಿನ ಜನ್ಮಗಳ ಸ್ಮರಣೆ ಉಂಟಾಗುತ್ತದೆ.

### ಆ) ಅಮೃತಮತಿ

ಇವಳು ಯಶೋಧರನ ಪತ್ನಿ. ನೀವು ಕಾವ್ಯದಲ್ಲಿ ಇವಳನ್ನು ವಿಷಮತಿಯನ್ನಾಗಿ ನೋಡುತ್ತೀರಿ ಗುಣವಂತನೂ, ರೂಪವಂತನೂ ಆದ ಪತಿಯನ್ನು ಗಡೆಗಣಿಸಿ, ಕುರೂಪಿಯೂ, ದುರ್ಗುಣಿಯೂ ಆದ ಅಷ್ಟಾವಂಕನನ್ನು ಪ್ರೀತಿಸಿ ತನುಮನಗಳನ್ನು ಅರ್ಪಿಸಿ ತಾನೂ ಕೆಟ್ಟು ಇತರರಿಗೂ ತೊಂದರೆ ಗಳುಂಟಾಗುವಂತೆ ಮಾಡುತ್ತಾಳೆ. ಮಾವುತನಾಗಿದ್ದ ಅಷ್ಟಾವಂಕ ಮಧುರ ಶಾರೀರವನ್ನು ಹೊಂದಿದ್ದರಿಂದ

ಅಮೃತಮತಿಯ ಮನಸ್ಸು ಆ ಶಾರೀರ ಯಾವ ಶರೀರಕ್ಕೆ ಸೇರಿದೆಯೋ ಆ ಶರೀರವನ್ನೇ ಮೋಹಿಸುವ ಮೂರ್ಖಳಾದಳು. ಅವಳ ದೂತಿಯು ಅಷ್ಟಾವಂಕನ ರೂಪವನ್ನು ವಾಕರಿಕೆಯುಂಟಾಗುವಂತೆ ವರ್ಣಿಸಿದರೂ ಅವಳಿಗೆ ಅಸಹ್ಯವಾಗದೆ 'ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್' (ಪ್ರಿಯತಮರ ರೂಪು ಚನ್ನಾಗಿಲ್ಲದಿದ್ರೇ ಒಳ್ಳೆಯದು) ಎಂದು ಹೇಳುತ್ತಾಳೆ. ಅಷ್ಟಾವಂಕನು ಹೊಡೆದಾಗಲೂ ಅವಳಿಗೆ ಅವನ ಬಗ್ಗೆ ತಿರಸ್ಕಾರವಾಗಲೀ ಕೋಪವಾಗಲೀ ಉಂಟಾಗುವುದಿಲ್ಲ. ಯಶೋಧರ, ಚಂದ್ರಮತಿಯರು ತಪಸ್ಸಿಗೆ ಹೋಗಬೇಕೆಂದು ನಿರ್ಧರಿಸಿದಾಗ ಅವರಿಗೆ ವಿಷದ ಆಹಾರವನ್ನು ಬಡಿಸಿ ಕೊಲ್ಲುವುದು ಇನ್ನೂ ಕ್ರೂರವಾದುದು, ಅವಳು ಪಾಪದಿಂದ ಪಾಪಕ್ಕೆ ಹೋಗುತ್ತಲೇ ಇರುತ್ತಾಳೆ. ಅಂತ್ಯಕಾಲದಲ್ಲಿ ಕುಷ್ಠರೋಗದಿಂದ ಸತ್ತು ನರಕಕ್ಕೆ ಹೋಗುತ್ತಾಳೆ.

### ಇ) ಚಂದ್ರಮತಿ

ಇವಳು ಯಶೋಧರನ ತಾಯಿ. ಮಗನು ತನ್ನ ಮನಸ್ಸಿನ ನೋವನ್ನು ನೇರವಾಗಿ ಹೇಳದೆ ಸಾಂಕೇತಿಕವಾಗಿ ಹೇಳಿದುದರಿಂದ ಅವಳು 'ಬಲಿ' ಕೊಡುವ ತೀರ್ಮಾನವನ್ನು ತೆಗೆದುಕೊಳ್ಳುತ್ತಾಳೆ. ಅವಳು ಮೂಢನಂಬಿಕೆಗೆ ಒಳಗಾಗಿದ್ದುದರಿಂದ ಹಟವನ್ನೂ ಮಾಡುತ್ತಾಳೆ. ಯಶೋಧರ ಬೇಡವೆಂದರೂ ಅವಳು ಕೇಳುವುದಿಲ್ಲ. ಪ್ರಾಣಿ ಬಲಿಯನ್ನು ಕೊಡದೆ ಹೋದರೆ ತನ್ನನ್ನೇ ತಾನು ಬಲಿಕೊಡುವೆನೆಂದು ಹೆದರಿಸುತ್ತಾಳೆ. ಇದರಿಂದ ಅವನು ಭಯಪಟ್ಟು ಹಿಟ್ಟಿನ ಕೋಳಿಯನ್ನು ಬಲಿಕೊಡಲು ಒಪ್ಪುತ್ತಾನೆ. ಆದರೆ ಸಂಕಲ್ಪ ಹಿಂಸೆ ಮಾಡಿದುದರಿಂದಲೇ ಘೋರವಾದ ಪರಿಣಾಮಗಳಿಗೆ ಗುರಿಯಾಗಬೇಕಾಯಿತು. ಅವಳು ನಾಯಿ, ಹಾವು, ಮೊಸಳೆ, ಆಡು, ಕೋಣ, ಕೋಳಿ, ಈ ಜನ್ಮಗಳನ್ನು ಎತ್ತಿ ಪಡಬಾರದ ಕಷ್ಟವನ್ನು ಪಟ್ಟು ಏಳನೆಯ ಜನ್ಮದಲ್ಲಿ ಅಭಯಮತಿಯಾಗಿ ಹುಟ್ಟುತ್ತಾಳೆ, ಅದೂ ಮೊಮ್ಮಗನ ಮಗಳಾಗಿ.

### ಈ) ಯಶೋಮತಿ

ಇವನು ಯಶೋಧರನ ಮಗ. ಅಮೃತಮತಿಯು ಅಷ್ಟಾವಂಕನಿಗೆ ಒಲಿಯುವ ಮೊದಲೇ ಇವನು ಹುಟ್ಟಿದ್ದನು. ಅವನಿಗೆ ತನ್ನ ತಾಯಿಯ ಬಗ್ಗೆ ಎಂತಹ ಅಭಿಪ್ರಾಯವಿತ್ತು ಎನ್ನುವುದು ಕಾವ್ಯದಲ್ಲಿ ಸ್ಪಷ್ಟವಾಗಿ ತಿಳಿಯುವುದಿಲ್ಲ. ಅವನೂ ಕೂಡ ಸುಖಜೀವನ ನಡೆಸುತ್ತಾ ಬಹಿರ್ಮುಖಿಯಾಗಿಯೇ ಇದ್ದನೆಂದು ತೋರುತ್ತದೆ. ಜನ್ನನು ಅವನನ್ನು ಮನ್ಮಥನಿಗೆ ಹೋಲಿಸಿದ್ದಾನೆ. ಒಮ್ಮೆ ಒಬ್ಬ ಸನ್ಯಾಸಿಯ ಮೇಲೆ ಐನೂರು ನಾಯಿಗಳನ್ನು ಛೂ ಬಿಡುತ್ತಾನೆ. ನಾಯಿಗಳು ಸುಮ್ಮನಾದುವೆಂದು ತಾನೇ ಖಡ್ಗ ಹಿಡಿದು ಹೊಡೆಯಲು ಹೋಗುತ್ತಾನೆ. ಆದರೆ ಸನ್ಯಾಸಿಯ ವ್ಯಕ್ತಿತ್ವವನ್ನು ತಿಳಿದ ಬಳಿಕ ಪ್ರಾಯಶ್ಚಿತ್ತ ಮಾಡಿಕೊಳ್ಳಲು ನಿರ್ಧರಿಸಿ ತನ್ನ ತಲೆಯನ್ನೇ ಅರ್ಪಿಸುವೆನೆಂದು ಹೇಳುತ್ತಾನೆ. ಅವನಿಗೆ ಬೇಟೆಯ ವ್ಯಾಮೋಹ ತುಂಬಾ ಹೆಚ್ಚಾಗಿತ್ತು, ಒಟ್ಟಾರೆ ಅವನು ಸುದತ್ತಾಚಾರ್ಯರನ್ನು ಭೇಟಿಯಾಗುವವರೆಗೆ ಸುಸಂಸ್ಕೃತ ವ್ಯಕ್ತಿಯಾಗಿರಲಿಲ್ಲ. ಇವನ ತಂದೆ ಮತ್ತು ಅಜ್ಜಿಯಾಗಿದ್ದ ಯಶೋಧರ ಮತ್ತು ಚಂದ್ರಮತಿ ಚಿರಜೀವಿಗಳು ಇವನ ಮಕ್ಕಳಾಗಿ (ಅವಳಿ) ಹುಟ್ಟುವುದೊಂದು ವಿಶೇಷವಾದ ಘಟನೆ.

## ಸನ್ನಿವೇಶ ನಿರ್ಮಾಣ

### ಅ) ಅಷ್ಟಾವಂಕನ ಪ್ರಕರಣ

ರಾಣಿ ಅಮೃತಮತಿಯು ಯಶೋಧರನೊಡನೆ ಎಲ್ಲರಂತೆ ಸಾಂಸಾರಿಕ ಜೀವನ ನಡೆಸುತ್ತಿದ್ದಳು. ರಾಜನು ಆಡಳಿತದಲ್ಲಿ ದಕ್ಷನಾದುದರಿಂದ ಎಲ್ಲವೂ ವ್ಯವಸ್ಥಿತವಾಗಿ ನಡೆದುಕೊಂಡು ಹೋಗುತ್ತಿತ್ತು. ಒಳಗೆ ಮತ್ತು ಹೊರಗೆ ಯಾವುದೇ ಅಪರಿಹಾರ್ಯ ಸಮಸ್ಯೆಗಳು ಅವರನ್ನು ಕಾಡುತ್ತಿರಲಿಲ್ಲ. ಆದರೆ ಜನಪದ ನಂಬಿಕೆಯಂತೆ ಕಾಲವು ಒಂದೇ ಸಮ ಇರುವುದಿಲ್ಲವಲ್ಲವೆ. ಅದನ್ನು ವಿಧಿಯೆಂದು

ಕರೆಯಬಹುದು ಅಥವಾ ಆಕಸ್ಮಿಕ ಘಟನೆ ಎನ್ನಬಹುದು. ಆನೆಯ ಮಾವುತ ಅಷ್ಟಾವಂಕನು ಶಾರೀರಿಕವಾಗಿ ಕುರೂಪಿಯಾದರೂ ಶಾರೀರ ಮಾತ್ರ ದಿವ್ಯವಾಗಿತ್ತು. ಅವನು ಹಾಡಿದ ಹಾಡಿನ ನಾದವು ಅಮೃತಮತಿಯ ಮನಸ್ಸನ್ನು ಸೆರೆಹಿಡಿಯಿತು. ಯಶೋಧರನಂತಹ ವ್ಯಕ್ತಿಯನ್ನೂ ತಿರಸ್ಕರಿಸಿ ಅಷ್ಟಾವಂಕನಲ್ಲಿ ಆಸಕ್ತಿಯನ್ನು ತೋರಿಸಿ ದೂತಿಯನ್ನು 'ನೋಡಿಕೊಂಡು ಬರಲು' ಕಳುಹಿಸುತ್ತಾಳೆ. ಅವಳು ಹಿಂದಿರುಗಿ ಬಂದು ಅವನ ಕುರೂಪವನ್ನು ವರ್ಣಿಸುತ್ತಾಳೆ. ಅಮೃತಮತಿಯು 'ಪ್ರೇಮವುಂಟಾದರೆ ರೂಪ ಹೇಗಿದ್ದರೇನು, ಅವನೆ ನನ್ನ ಪಾಲಿನ ಇಂದ್ರ, ಚಂದ್ರ, ಕುಲದೈವ' ಎನ್ನುತ್ತಾಳೆ. ಅವಳು ಚಾವಟಿಯಿಂದ ಹೊಡೆದರೂ ಕೇರೆ ಹಾವು ಹೊರಳಾಡುವಂತೆ ಅವಳ ಕಾಲ ಮೇಲೆ ಬಿದ್ದು ಒದ್ದಾಡುತ್ತಾಳೆ. ಅಂತೂ ಗಂಡನಿಗೆ ಮೋಸಮಾಡಿ ಕುರೂಪಿಯೊಡನೆ ಕಾಮ ಪ್ರೇಮಗಳ ಜೀವನವನ್ನು ನಡೆಸುತ್ತಾಳೆ. ಕವಿಯು ಕಾಮದ ಸೆಳೆತಕ್ಕೆ ಒಳಗಾದವರ ದುಸ್ಥಿತಿಯನ್ನು ಇಲ್ಲಿ ಚಿತ್ರಿಸಿದ್ದಾನೆ. ಹಂದಿಯು ಕೆಸರಿನಲ್ಲಿ ಬಿದ್ದು ಹೊರಳಾಡುವಾಗ ನೋಡಿದವರಿಗೆ ಅಸಹ್ಯವೆನಿಸಿದರೂ ಅದು ಮಾತ್ರ ಸ್ವರ್ಗಸುಖ ಅನುಭವಿಸುತ್ತಿರುತ್ತದಲ್ಲವೆ. ಕುಡಿದು ತೂರಾಡಿ ಎಲ್ಲೆಂದೂದರಲ್ಲಿ ಬೀಳುವ ಕುಡುಕನನ್ನು ಕಂಡು ಜನ ಅಯ್ಯೋ ಪಾಪ ಎಂದರೂ ಅವನಿಗೆ ದಿವ್ಯ ಸುಖದ ಭಾವನೆ ಇರುವುದಿಲ್ಲವೆ, ಹಾಗೆಯೇ ಅಮೃತಮತಿಯೂ ಕೂಡ ಇಲ್ಲಿ ನಡೆದುಕೊಂಡಿದ್ದಾಳೆ.

### ಆ) ಹಿಟ್ಟಿನ ಕೋಳಿಯ ಪ್ರಸಂಗ

ಯಶೋಧರನು ತಾಯಿಯ ಬಳಿ ತನ್ನ ವೇದನೆಯನ್ನು ಹೇಳಿಕೊಳ್ಳಲಾರದೆ, ತಾನೊಂದು ಕೆಟ್ಟ ಸ್ವಪ್ನವನ್ನು ಕಂಡೆನೆಂದು ಹೇಳಿ ಸತ್ಯವನ್ನು ಮುಚ್ಚಿಡುತ್ತಾನೆ. ಅವನು ಅಸತ್ಯ ಹೇಳಿ ಇನ್ನೂ ತೊಂದರೆಗೆ ಗುರಿಯಾಗುತ್ತಾನೆ. ಚಂದ್ರಮತಿಯು ಹಳೆಯ ಸಂಸ್ಕಾರ ವಿಶೇಷದಿಂದ ಪ್ರಾಣಿಬಲಿ ಕೊಡಬೇಕೆಂದು ಸೂಚಿಸುತ್ತಾಳೆ. ಯಶೋಧರನು ತಾಯಿಯ ಅಪೇಕ್ಷೆಗೆ ಅಂಜಿಕೊಂಡು ಬಲಿಕೊಡುವುದು ಬೇಡವೆಂದು ಹೇಳಿದಾಗ ಅವಳು 'ತನ್ನನ್ನೇ ಬಲಿಕೊಟ್ಟುಕೊಳ್ಳುವೆನೆಂದು' ವಾದಿಸುತ್ತಾಳೆ. ಇದರಿಂದ ಅವನು ಉಭಯ ಸಂಕಟಕ್ಕೆ ಸಿಕ್ಕಿಕೊಳ್ಳುತ್ತಾನೆ. ಅವಳು ಕಡೆಗೆ ಒಂದು ಹಿಟ್ಟಿನ ಕೋಳಿಯನ್ನಾದರೂ ಬಲಿಕೊಡಬೇಕೆಂದು ಹಟ ಹಿಡಿದಾಗ ಅವನು ಸತ್ಯಕ್ಕೆ ಶರಣಾಗಬೇಕಾಯಿತು. ಸತ್ಯ ಯಾವಾಗಲೂ ಮನುಷ್ಯರಿಗಿಂತ ದೊಡ್ಡದು. ಜನರಿಗೋಸ್ಕರ ಸತ್ಯವನ್ನು ಅವನು ಬಿಟ್ಟಂತಾಯಿತು. ಆ ಕೋಳಿಗೆ ಜೀವವಿಲ್ಲದಿರುವುದರಿಂದ ಕೇವಲ ಆಟದಂತೆ ನಡೆದುಹೋಗುತ್ತದೆ ಎಂದು ಭಾವಿಸುತ್ತಾನೆ. ಕವಿಯು ಇಲ್ಲಿ ಒಂದು ತಂತ್ರವನ್ನು ಪ್ರಯೋಗಿಸುತ್ತಾನೆ. ಅವರು ಬಲಿಕೊಡುವಾಗ ಕೋಳಿಯ ಒಳಗಿದ್ದ ಬೆಂತರವು ಕೂಗಿಕೊಂಡು ಮಾಯವಾಗುತ್ತದೆ. ಯಶೋಧರನು ದಿಗ್ಭ್ರಾಂತವಾಗುತ್ತಾನೆ. ಇದು ತನ್ನ ವಿಧಿ ಎಂದು ಕೊರಗುತ್ತಾನೆ.

ಈ ಪ್ರಸಂಗವೇ ಮುಂದಿನ ಭವಾಳಿಗಳಿಗೆ ಕಾರಣವಾಗುತ್ತದೆ. ಜೈನಮತ ಅಹಿಂಸೆಯೇ ಪರಮ ಧರ್ಮ ಎಂದು ಹೇಳುತ್ತದೆ. ಇಲ್ಲಿ ರಕ್ತಪಾತವಾಗಲಿಲ್ಲ, ಜೀವ ಹಾನಿಯಾಗಲಿಲ್ಲ. ಆದರೂ ಬಲಿಕೊಡುವ ಸಂಕಲ್ಪವೇ ದೋಷಪೂರ್ಣವಾದುದು. ಏಕೆಂದರೆ ಅದು ಜೀವಂತ ಪ್ರಾಣಿಯನ್ನು ಬಲಿಕೊಡುವುದರ ಸಂಕೇತ.

ಮನಸ್ಸಿನಲ್ಲಿ ಬಲಿ ಕೊಡುತ್ತಿದ್ದೇವೆ ಎಂಬ ಭಾವನೆ ಇರುತ್ತದಲ್ಲವೆ. ಆದ್ದರಿಂದ ಏನಾಯಿತು ನೋಡಿ ಎಷ್ಟು ಜನ್ಮಗಳು, ಏನು ಕಷ್ಟ, ಎಲ್ಲವನ್ನೂ ಓದಿದ್ದೀರಿ. ಪ್ರಾಣಿಹಿಂಸೆಯನ್ನು ತಪ್ಪಿಸಬೇಕು ಎಂಬುದು ಕವಿಯ ಉದ್ದೇಶವಾಗಿತ್ತು. ಎಂಬುದನ್ನು ನೀವು ಅರ್ಥಮಾಡಿಕೊಳ್ಳಬೇಕು. ಕಾವ್ಯಗಳಲ್ಲಿ ನೀತಿಯು ಹೀಗೆ ಪರೋಕ್ಷ ವಿಧಾನದಲ್ಲಿ ನಿರೂಪಿತವಾಗುತ್ತದೆ.

### ಇ) ಮಾರಿದತ್ತನ ಪರಿವರ್ತನೆ

ಈತನು ರಾಜಪುರದ ಅರಸ. ಚಂಡಿಮಾರಿಯ ಭಕ್ತ. ವರ್ಷಕ್ಕೆ ಒಂದು ಸಲ ದೊಡ್ಡ ಜಾತ್ರೆ ನಡೆಯುತ್ತಿತ್ತು. ಪ್ರಾಣಿಗಳ ಬಲಿ ಮಾತ್ರವಲ್ಲ ಇಬ್ಬರು ಮನುಷ್ಯರ ಬಲಿಯನ್ನೂ ಕೊಡುವ

ಸಂಪ್ರದಾಯವಿತ್ತು ಮಾರಿದತ್ತನ ಸೇವಕನು ಅಭಯರುಚಿ, ಅಭಯಮತಿ ಎಂಬ ಅವಳಿಗಳನ್ನು ಹಿಡಿದುತಂದ. ಅವರಿಬ್ಬರೂ ಯಾರು ಎಂಬುದನ್ನು ನೆನಪು ಮಾಡಿಕೊಳ್ಳಿ. ಅವರು ಏಳು ಜನ್ಮಗಳ ಹಿಂದೆ ಯಶೋಧರ ಮತ್ತು ಅವನ ತಾಯಿ ಚಂದ್ರಮತಿ ಆಗಿದ್ದವರು. ಅವರು ಮಾರಿದತ್ತನ ಕೋರಿಕೆಯಂತೆ ಅವನಿಗೆ ಆರ್ಶಿವಾದ ಮಾಡುವಾಗ ಪ್ರಸನ್ನತೆಯಿಂದ ಕೂಡಿರುತ್ತಾರೆ. ಆ ಚಿಕ್ಕವಯಸ್ಸಿನ ಮಕ್ಕಳ ಧೈರ್ಯಕ್ಕೆ ಬೆರಗಾಗಿ ಅವರ ಜೀವನ ವೃತ್ತಾಂತವನ್ನು ಕೇಳಲು ಇಚ್ಛಿಸುತ್ತಾನೆ. ಅವನ ಬಲವಂತಕ್ಕೆ ಸೋತು, ಅವನಿಗೆ ಕಾಲಲಬ್ಧಿ ದೊರಕಿದೆ ಎಂದು ತಿಳಿದು ತನಗೆ ಮತ್ತು ತನ್ನ ತಂಗಿಗೆ ಸಂಬಂಧಿಸಿದ ಜೀವನ ವಿಚಾರವನ್ನು ನಿರೂಪಿಸಲು ಪ್ರಾರಂಭಿಸುತ್ತಾನೆ. ಮಾರಿದತ್ತನಿಗೆ ಇದೆಲ್ಲವೂ ಬಹಳ ವಿಚಿತ್ರವಾಗಿ ಕೇಳಿಸುತ್ತದೆ. ಆ ಮಕ್ಕಳ ಬಾಯಿಯಿಂದ ಬರುವ ಮಾತಿನ ಅದ್ಭುತವಾದ ಅರ್ಥವನ್ನು ತಿಳಿದುಕೊಳ್ಳಲು ಯತ್ನಿಸುತ್ತಾನೆ. ಅವರು ತಮ್ಮ ನಿದರ್ಶನವನ್ನೇ ಮುಂದಿಟ್ಟು ಸತ್ಯಸ್ಯಸತ್ಯವನ್ನೇ ಹೇಳುತ್ತಿರುವಾಗ ಅವನು ನಂಬದೆ ಇರುವುದು ಕಷ್ಟವಾಗುತ್ತದೆ. ಹಿಂಸೆಯ ಪರಿಣಾಮ ಏನೆಂಬುದು ಅವನಿಗೆ ಮನದಟ್ಟಾಗುತ್ತದೆ. ಅಭಯರುಚಿ ಅಭಯಮತಿ ಇಬ್ಬರೂ ತನ್ನ ತಂಗಿಯ ಮಕ್ಕಳೆಂದು ತಿಳಿದಾಗ ಇನ್ನಷ್ಟು ಮೃದುವಾಗುತ್ತಾನೆ. ಹಿಂಸಾರಭಸಮತಿಯಾಗಿದ್ದ ಮಾರಿದತ್ತನು ಅಹಿಂಸಾವ್ರತವನ್ನು ಸ್ವೀಕರಿಸುತ್ತಾನೆ.

ಹೀಗೆ ಈ ಕಾವ್ಯದಲ್ಲಿ ಹಲವಾರು ಸುಂದರವಾದ ಸನ್ನಿವೇಶಗಳು ಕಂಡು ಬರುತ್ತವೆ.

## 'ಅನಂತನಾಥ ಪುರಾಣ'

### ಆಕರ

ಈ ಕಾವ್ಯಕ್ಕೆ ಗುಣಭದ್ರಾಚಾರ್ಯರ 'ಉತ್ತರ ಪುರಾಣ'ವು ಆಕರವಾಗಿದೆ. ಅದರಲ್ಲಿ ಅನಂತನಾಥನಿಗೆ ಸಂಬಂಧಿಸಿದ ೫೮ ಶ್ಲೋಕಗಳಿವೆ. ಅದರ ಆಧಾರದ ಮೇಲೆ ಕವಿಯು ಹದಿನಾಲ್ಕು ಆಶ್ವಾಸಗಳನ್ನುಳ್ಳ ದೊಡ್ಡಕಾವ್ಯವನ್ನು ರಚಿಸಿದ್ದಾನೆ.

### ಕಥಾವಸ್ತು

ಈ ಕಾವ್ಯದ ವಸ್ತುವೆಂದರೆ ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥನ ಜೀವನ ಸಾಧನೆ ಮತ್ತು ಸಿದ್ಧಿ. ಈ ಕಾವ್ಯದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ತೀರ್ಥಂಕರ ಚರಿತ್ರೆಯಿದೆ. ಎರಡನೆಯ ಭಾಗದಲ್ಲಿ ಚಂಡಶಾಸನನ ಕಥೆಯಿದೆ. ಅನಂತನಾಥನ ಕಥೆಯು ತುಂಬಾ ಚಿಕ್ಕದು. ಅದರಲ್ಲಿ ಎರಡು ಭವಗಳ ವಿಚಾರವಿದೆ. ಜೈನಪುರಾಣ ಕಾವ್ಯಗಳು ಸಾಮಾನ್ಯವಾಗಿ ಒಂದೇ ರೀತಿಯಲ್ಲಿರುತ್ತವೆ. ತೀರ್ಥಂಕರನ ಹೆಸರು ಮಾತ್ರ ಬೇರೆಯಾಗುತ್ತದೆ. ಉಳಿದೆಲ್ಲ ವಿಷಯಗಳೂ ಒಂದೇ ರೀತಿಯಲ್ಲಿರುತ್ತವೆ. ಕವಿಯು ಕಥೆಯನ್ನು ಹೇಳಲು ಹಿನ್ನೋಟ ತಂತ್ರವನ್ನು ಬಳಸಿಕೊಂಡಿದ್ದಾನೆ. ಅದೇ ಕ್ರಮದಲ್ಲಿ ಹೇಳುವುದಾದರೆ ಹೀಗೆ ನಿರೂಪಿಸಬಹುದು.

ಈ ಜನ್ಮದಲ್ಲಿ ಅನಂತನಾಗಿ ಹುಟ್ಟಿರುವವನು ಹಿಂದಿನ ಜನ್ಮದಲ್ಲಿ ಅರಿಷ್ಟನಗರದ ರಾಜ ಪದ್ಮರಥನಾಗಿದ್ದನು. ಒಮ್ಮೆ ಆಕಾಶದ ಕಡೆ ನೋಡಿದಾಗ ಒಂದು ಉಲ್ಕೆಯು ಬೀಳುತ್ತಿರುವುದನ್ನು ನೋಡಿ ಸಾಂಸಾರಿಕ ಜೀವನದಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುತ್ತಾನೆ. ಅವನು ಮಗನಿಗೆ ರಾಜ್ಯವನ್ನು ವಹಿಸಿಕೊಟ್ಟು, ತಪಸ್ಸಿಗೆ ಹೋಗುತ್ತಾನೆ. ದೀರ್ಘಕಾಲ ತಪಸ್ಸು ಮಾಡಿ ಮಡಿದು ದೇವಜನ್ಮವನ್ನು ಪಡೆದುಕೊಳ್ಳುತ್ತಾನೆ. ಅಲ್ಲಿಯ ಆಯುಷ್ಯವು ಮುಗಿದ ಬಳಿಕ ಪುನಃ ಭೂಮಿಯಲ್ಲಿ ಹುಟ್ಟಬೇಕಾಗುತ್ತದೆ. ಅಯೋಧ್ಯಪುರದ ರಾಜರಾಣಿಯರಾದ ಸಿಂಹಸೇನ, ಜಯಶ್ಯಾಮೆಯರ ಮಗನಾಗಿ ಹುಟ್ಟಿ ಅನಂತ ಎಂಬ ಹೆಸರನ್ನು ಪಡೆದು ಬೆಳೆಯುತ್ತಾನೆ. ಅವನು ತರುಣನಾದಾಗ ರತ್ನಮಾಲೆಯೊಡನೆ ವಿವಾಹವು ನಡೆಯುತ್ತದೆ. ಅವರಿಗೆ ವಿಜಯ ಎಂಬ ಮಗನೂ ಹುಟ್ಟುತ್ತಾನೆ. ಅನಂತನ ಜೀವನವು ಸುಖವಾಗಿ ಸಾಗುತ್ತಿರುತ್ತದೆ. ಆದರೆ ಅನಂತನು ಒಂದು ರಾತ್ರಿ ಮಿಂಚನ್ನು ನೋಡಿ, ಜೀವನವು ಮಿಂಚಿನಂತೆ ಕ್ಷಣಿಕವೆಂದು ತಿಳಿದು

ವೈರಾಗ್ಯಪರನಾಗಿ, ಮಗನಿಗೆ ರಾಜ್ಯವನ್ನು ವಹಿಸಿ ತಪಸ್ಸಿಗೆ ಹೋಗುತ್ತಾನೆ. ಅವನು ಉಗ್ರತಪಸ್ಸನ್ನು ಮಾಡಿ ಕೇವಲಜ್ಞಾನವನ್ನು ಪಡೆದುಕೊಂಡು, ಧರ್ಮಪ್ರವಚನ ಮಾಡುತ್ತಾನೆ.

ಅನಂತಜಿನನನ್ನು ನೋಡಲು ಬಂದಿದ್ದ ಒಬ್ಬ ಖೇಚರಿಯು ಹಿಂದಿರುಗುವಾಗ ತನಗೆ ಸಿಕ್ಕಿದ ಗೆಳತಿಯೊಡನೆ ಮಾತನಾಡುತ್ತ ತಾನು ಕೇಳಿದ ಕಥೆಯನ್ನು ಹೇಳುತ್ತಾಳೆ. ಆ ಕಥೆಯ ವಿಷಯವೇನೆಂದರೆ ಸುಪ್ರಭನೆಂಬ ನಾಲ್ಕನೆಯ ಬಲದೇವನ ಮತ್ತು ಅವನ ತಮ್ಮನ ಪೂರ್ವಜನ್ಮವೃತ್ತಾಂತ. ಇದನ್ನು ಈ ಕಾವ್ಯದ ಎರಡನೆಯ ಭಾಗವೆನ್ನಬಹುದು. ಇದರಲ್ಲಿ ರಾಮಾಯಣದ ಸೀತಾಹರಣ ಕಾರ್ಯವನ್ನು ಹೋಲುವ ಒಂದು ಘಟನೆ ನಡೆಯುತ್ತದೆ. ಕವಿಯ ಉದ್ದೇಶ ಇದಿಷ್ಟನ್ನೇ ಹೇಳುವುದಲ್ಲ, ಅದರಿಂದ ಮುಂದಕ್ಕೂ ನಡೆಯುವ ಕಥೆಯೂ ಕವಿಗೆ ಮುಖ್ಯ. ಎರಡನೆಯ ಭಾಗವನ್ನು ಚಂಡಶಾಸನೋಪಾಖ್ಯಾನ ಎಂದು ಕರೆಯಬಹುದು. ಈ ಭಾಗದ ಕಥೆಗೂ ಅನಂತನಾಥನಿಗೂ ಏನೂ ಸಂಬಂಧವಿಲ್ಲ. ಈ ಕಥೆಯನ್ನು ಹೀಗೆ ಸಂಗ್ರಹಿಸೋಣ - ಪೌದನಾಪುರದ ರಾಜದಂಪತಿಗಳು ವಸುಷೇಣ ಮತ್ತು ಸುನಂದೆ. ಮಕರಗ್ರಾಹ ಪುರದ ರಾಜ ಚಂಡಶಾಸನನು ವಸುಷೇಣನ ಬಾಲ್ಯಸ್ನೇಹಿತ. ಒಮ್ಮೆ ಮಿತ್ರನನ್ನು ಭೇಟಿಯಾಗಲು ಬಂದ ಚಂಡಶಾಸನನು ಸುನಂದೆಯ ಅತಿಶಯವಾದ ರೂಪು ಲಾವಣ್ಯಗಳನ್ನು ಕಂಡು, ಸಮಯ ಸಾಧಿಸಿ ಅಪಹರಿಸಿಕೊಂಡು ಹೋಗುತ್ತಾನೆ. ಅವನನ್ನು ದಾರಿಯಲ್ಲಿ ಸಿಂಹಚೂಡ ಎಂಬ ಸಾಮಂತನು ತಡೆದು ಹೋರಾಡಿ ಸಾಯುತ್ತಾನೆ (ಜಟಾಯುವನ್ನು ನೆನಪು ಮಾಡಿಕೊಳ್ಳಿ).

ವಸುಷೇಣನು ದಂಡೆತ್ತಿ ಬಂದು ಮಕರಗ್ರಾಹಪುರಕ್ಕೆ ಮುತ್ತಿಗೆ ಹಾಕುತ್ತಾನೆ. ಚಂಡಶಾಸನನು ಕೃತಕಶಿರವನ್ನು ಸುನಂದೆಗೆ ತೋರಿಸಿ ವಸುಷೇಣ ಸತ್ತನೆಂದು ಹೇಳುತ್ತಾನೆ. ಸುನಂದೆಯು ಮರುಕ್ಷಣದಲ್ಲಿಯೇ ನಿಧನಳಾಗುತ್ತಾಳೆ. ಚಂಡಶಾಸನನು ಅವಳೊಡನೆ ಸಹಗಮನ ಮಾಡುತ್ತಾನೆ. ವಸುಷೇಣ ಯುದ್ಧ ನಿಲ್ಲಿಸಿ ತಪಸ್ಸಿಗೆ ಹೋಗುತ್ತಾನೆ ; ದೇಹತ್ಯಾಗ ಮಾಡಿ ದೇವಜನ್ಮವನ್ನು ಪಡೆಯುತ್ತಾನೆ ದೇವಜನ್ಮದ ಆಯುಷ್ಯವು ಮುಗಿದಾಗ ಸೋಮಪ್ರಭ ರಾಜನ ಒಬ್ಬ ರಾಣಿಯಾದ ಸೀತೆ ಎಂಬುವಳಲ್ಲಿ ವಾಸುದೇವನಾಗಿ ಹುಟ್ಟುತ್ತಾನೆ. ಇನ್ನೊಬ್ಬ ರಾಣಿಯ ಹೊಟ್ಟೆಯಲ್ಲಿ ಬಲದೇವ ಹುಟ್ಟುತ್ತಾನೆ. ಈ ಬಲದೇವ, ವಾಸುದೇವರೆ 'ಬಲರಾಮ-ಕೃಷ್ಣ' ರು ಚಂಡಶಾಸನನು ಮಧುಕೈಟಭ ಎಂಬ ದೈತ್ಯನಾಗಿ ಹುಟ್ಟಿ ಅರ್ಧಚಕ್ರಿಯಾಗಿ ಮೆರೆಯುತ್ತಿರುತ್ತಾನೆ.

ಬಲದೇವ, ವಾಸುದೇವರು ಮಧುಕೈಟಭನ ಮೇಲೆ ಯುದ್ಧ ಮಾಡಿ ಅವನನ್ನು ಕೊಲ್ಲುತ್ತಾರೆ. ಇದಿಷ್ಟು ಅನಂತನಾಥಪುರಾಣ ಕಾವ್ಯದಲ್ಲಿ ನಿರೂಪಿತವಾಗಿರುವ ಕಥಾಭಾಗ.

## ಅನುಭವ ಮುಕುರ

### ಆಕರ

ಅನುಭವ ಮುಕುರ ಎಂಬುದು ಕಾಮಶಾಸ್ತ್ರಕ್ಕೆ ಸಂಬಂಧಿಸಿದುದು. ಸಾಮಾನ್ಯವಾಗಿ ಕವಿಗಳು ತಮ್ಮ ಕಾವ್ಯಗಳಲ್ಲಿ ವೇಶ್ಯಾವಾಟಿಕೆಯನ್ನು ವರ್ಣಿಸುತ್ತಾರೆ. ಅವರು ವಾತ್ಸ್ಯಾಯನನ ಕಾಮಸೂತ್ರಗಳನ್ನು ಓದಿ ತಿಳಿವಳಿಕೆ ಪಡೆಯುತ್ತಾರೆ. ಅದ್ದರಿಂದ 'ಅನುಭವ ಮುಕುರ' ಗ್ರಂಥಕ್ಕೆ ಕಾಮಸೂತ್ರ ಗ್ರಂಥವೇ ಅಕರವಾಗಿರಬಹುದು ಅಥವಾ ಕಾಮಸೂತ್ರವನ್ನು ಆಧರಿಸಿದ ಬೇರೆ ಯಾವುದಾದರೂ ಕೃತಿಯು ಜನ್ನನಿಗೆ ಪ್ರೇರಣೆ ನೀಡಿರಬಹುದು.

### ಕಥಾವಸ್ತು

ಈ ಗ್ರಂಥದಲ್ಲಿ ಕವಿಯು ಸಾಂಸಾರಿಕ ಅಥವಾ ದಾಂಪತ್ಯ ಜೀವನವನ್ನು ನೀತಿ ಸಂಪನ್ನವಾಗಿಸಲು ಯತ್ನಿಸಿದ್ದಾನೆ. ಹೆಣ್ಣಿನ ಪ್ರಕೃತಿಯನ್ನು ಅರಿತುಕೊಳ್ಳಬೇಕಾದುದು ಗಂಡಿನ ಕರ್ತವ್ಯ ಎಂಬುದು ಕವಿಯ ಆಶಯ. ಅದ್ದರಿಂದ ಕಾಮಶಾಸ್ತ್ರದ ಪರಿಚಯವು ಅಗತ್ಯವಾಗಿದೆ ಎಂದು ಕವಿಯು ಭಾವಿಸುತ್ತಾನೆ.

ಹೆಣ್ಣಿನ ಸಹವಾಸದಿಂದ, ಪ್ರೇಮಕಾಮಗಳ ಒಡನಾಟದಿಂದ ದಾಂಪತ್ಯ ಜೀವನ ಸುಖಮಯವಾಗುತ್ತದೆ ಎಂದು ಕವಿಯು ತಿಳಿಸುತ್ತಾನೆ.

## ಕೃತಿಯ ಭಾಷೆ ಮತ್ತು ಶೈಲಿ

### ಭಾಷೆ

ಅ) 'ಯಶೋಧರ ಚರಿತೆ'ಯು ಕಂದಪದ್ಯಗಳಿಂದ ಕೂಡಿದೆ, ಕಂದ ಪದ್ಯಗಳು ವೃತ್ತಗಳ ಹಾಗೆ ದೀರ್ಘವಾದ ಚರಣಗಳಿಂದ ಕೂಡಿರುವುದಿಲ್ಲ. ಈ ಕಾವ್ಯದಲ್ಲಿ ಆಡು ಮಾತುಗಳು, ನಾಣ್ಣುಡಿಗಳು ಹೆಚ್ಚಿನ ಪ್ರಮಾಣದಲ್ಲಿದ್ದು, ದೇಸಿಯ ಸೊಬಗು ಸ್ಪಷ್ಟವಾಗಿ ಕಂಡುಬರುತ್ತದೆ. ಜನ್ನನು ತನ್ನನ್ನು ಕುರಿತು ಚತುರ್ವಿಧ ಪಂಡಿತ, ಕವಿಗಳೊಳಗೆ ವೈಯಾಕರಣನ್ ಎಂದು ಕೊಂಡಿದ್ದಾನೆ. ಚಿಕ್ಕ ಮಾತುಗಳು, ಸಂಭಾಷಣೆಗಳು ಕಂದಪದ್ಯಗಳಲ್ಲಿ ಕಂಡು ಬರುತ್ತವೆ. ಸಂಸ್ಕೃತ ಸಮಾಸಗಳಿಂದ ಕೂಡಿದ ಕಂದಪದ್ಯಗಳೂ ಇವೆ. ಮತ್ತು ಉಚಿತ ಸ್ವರೂಪದ ಸಂಸ್ಕೃತ ವಾಕ್ಯಗಳಿಂದ ಕೂಡಿದ ಪದ್ಯಗಳೂ ಇವೆ.

ಆ) 'ಅನಂತನಾಥ ಪುರಾಣ'ದ ಭಾಷೆಯು ಯಶೋಧರ ಚರಿತೆಯಲ್ಲಿ ಬಳಸಿರುವ ಭಾಷೆಗಿಂತ ಸ್ವಲ್ಪ ಕ್ಲಿಷ್ಟವಾದುದು. ಈ ಕಾವ್ಯದ ವೃತ್ತ ಪದ್ಯಗಳಲ್ಲಿ ಸಂಸ್ಕೃತ ಭೂಯಿಷ್ಠವಾದುವೂ ಇವೆ, ಸರಳವಾದುವೂ ಇವೆ. ಇಲ್ಲಿ ಕಂದ ಪದ್ಯಗಳು ಚಿಕ್ಕ ಪದಗಳಿಂದ ತುಂಬಿರುವುದನ್ನು ಕಾಣುವುದು ವಿರಳ.

ಇ) 'ಅನುಭವ ಮುಕುರ'ದ ಭಾಷೆಯು ಸಾಮಾನ್ಯವಾಗಿ ಪ್ರೌಢವಾದ ಹಳಗನ್ನಡವಾಗಿದೆ. ಶಬ್ದಾಲಂಕಾರ ಪ್ರೀತಿಯು ಹೆಚ್ಚಿರುವಂತೆ ತೋರುತ್ತದೆ. ಪದ ಜೋಡಣೆಯಲ್ಲಿ ಸೊಗಸು ಕಡಿಮೆಯೆನ್ನಿಸುತ್ತದೆ.

### ಕೃತಿ ಶೈಲಿ

ಅ) ಯಶೋಧರ ಚರಿತೆ'ಯ ಶೈಲಿಯನ್ನು ಗಮನಿಸಿದಾಗ ದೇಸಿ ಪ್ರಚುರತೆಯೂ ಒಂದು ಮುಖ್ಯವಾದ ಅಂಶವಾಗುತ್ತದೆ. ದೇಸಿ ಎಂದರೆ ಏನೆಂದು ತಿಳಿದಿರಿ. ಜನರ ಆಡುವ ಆತ್ಮೀಯವಾದ ಒಂದು ರೀತಿಯನ್ನು ಗಮನಿಸಿ, ಅದರಲ್ಲಿ ಗಾದೇ, ನಾಣ್ಣುಡಿ, ದೃಷ್ಟಾಂತ ಇತ್ಯಾದಿಗಳೂ ಸೇರಿರುತ್ತವೆ. ಸಂಸ್ಕೃತದ ಸ್ಪರ್ಶವೂ ಅಲ್ಲಿರುವುದಿಲ್ಲ. 'ಓಹ್ ಇದು ನಾವು ಆಡುವ ರೀತಿಯಲ್ಲಿದೆ' ಎಂಬ ಭಾವನೆಯನ್ನು ಮೂಡಿಸುವಂತಿರುತ್ತದೆ. ಉದಾಹರಣೆಗೆ 'ಅಡಿದ ಹೊಲನುಂಡಮರ್ದು ಕಂಡ ವಿಚಾರ' 'ಬೇಡಿದ ಕಾಡೊಳ್ ಮಳೆಯಾಯ್ತು' 'ಸೊರ್ಕಿದ ಗೂಳಿ ತಾಯನೇರಿತ್ತು' ಇತ್ಯಾದಿ. ಇಲ್ಲಿನ ಕಂದಪದ್ಯಗಳಲ್ಲಿ ಸಂಸ್ಕೃತ ಲೋಕೋಕ್ತಿಗಳನ್ನು ಗಮನಿಸಬೇಕು - 'ಚಿತ್ರಂ ಅಪಾತ್ರೇ ರಮತೇ ನಾರಿ' 'ಯಥಾ ರಾಜ ತಥಾ ಪ್ರಜಾ' 'ದುರ್ಬಲಸ್ಯ ಬಲೋ ರಾಜ' ಇತ್ಯಾದಿ.

ಆ ) 'ಅನಂತನಾಥ ಪುರಾಣ'ದ ಶೈಲಿಯ ಬಗ್ಗೆ ಕವಿಯೇ ಒಂದು ಮಾತು ಹೇಳಿದ್ದಾನೆ. ಕರ್ಪೂರದ ಪಳುಕು (ಹರಳು) ಕ್ಷೀರ ಸಮುದ್ರದ ಸವಿ, ಮುತ್ತಿನ ಸಿರಿ ಮುಂತಾದುವಕ್ಕೆ ಸಮಾನ ತನ್ನ ರಚನೆ ಎಂದು ಹೇಳಿದ್ದಾನೆ. ಮೊದಲನೆಯ ಭಾಗವಾದ ಅನಂತನ ಕಥೆಯಲ್ಲಿ ಸಂಸ್ಕೃತ ಸಮಾಸಗಳ ಪ್ರಚುರತೆಯಿದೆ. ವಿರಳವಾಗಿ ದೇಸಿ ನುಡಿಗಳು, ನಾಣ್ಣುಡಿಗಳೂ ಇವೆ. ಚಂಡಶಾಸನ ಕಥೆಯಲ್ಲಿ ದೇಸಿಗೇ ಪ್ರಾಶಸ್ತ್ಯವಿದೆ. ಆಡುನುಡಿಗಳ ಬಳಕೆ ಹೃದ್ಯವಾಗಿದೆ. ಉದಾಹರಣೆಗೆ 'ಪರಿವ ಮನಕ್ಕೆ ಪಗ್ಗಮಿಲ್ಲ, ನಡುವ ಕಂಗಳಿಗೆಡೆ ಕಟ್ಟಿಲ್ಲ' 'ಕರುಳ ಕತ್ತರಿ, ನೆಂಟರ ಮಾರಿ' 'ಗಾಳಿಗೆ ಗರಿ ಮೂಡಿದಂತೆ' ಇತ್ಯಾದಿ.

ಇ) 'ಅನುಭವ ಮುಕುರ'ದಲ್ಲಿ ಕ್ರಮಬದ್ಧವಾದ ನಿರೂಪಣೆಯಿಲ್ಲ. ಒಂದು ಪ್ರಾರಂಭ, ಬೆಳವಣಿಗೆ, ಮುಕ್ತಾಯ ಎಂಬ ನಿರ್ದಿಷ್ಟವಾದ ಕ್ರಮವಿಲ್ಲ. ಆದರೆ ಕವಿಯು ವಿಶೇಷವಾದ ರೀತಿಯ ಛಂದಸ್ಸನ್ನು ಪ್ರಯೋಗಿಸಿದ್ದಾನೆ. ಅದು ಹಿಂದೆಂದೂ ಅಷ್ಟು ಬಳಕೆಯಲ್ಲಿದ್ದುದಲ್ಲ. ಸಂಸ್ಕೃತದ ಅಕ್ಷರ ಛಂದಸ್ಸನ್ನು

ಕವಿಯು ಬಳಸಿಕೊಂಡಿದ್ದಾನೆ. ಸಾಮಾನ್ಯವಾಗಿ ಕನ್ನಡ ಕವಿಗಳು ಆರು ಸಂಸ್ಕೃತ ವೃತ್ತಗಳನ್ನು ಮಾತ್ರ ತೆಗೆದುಕೊಂಡಿದ್ದಾರೆ. ಜನ್ನ ಕವಿಯು ಬೇರೆ ವೃತ್ತಗಳನ್ನೂ ತೆಗೆದುಕೊಂಡಿದ್ದಾನೆ. ದೇಸೀ ಛಂದಸ್ಸಿನ ವೃತ್ತಗಳು ಇದರಲ್ಲಿ ಕಂಡುಬರುವುದಿಲ್ಲ.

### ಕೃತಿ ಮಹತ್ವ

ಅ. ಯಶೋಧರ ಚರಿತೆಯು ತೀರ್ಥಂಕರರನ್ನು ಕುರಿತ ಕಾವ್ಯವಲ್ಲ. ಅದು ಒಂದು ಧಾರ್ಮಿಕ ಕಾವ್ಯವೆನ್ನಿಸಿಕೊಂಡಿದೆ. ಇದರಲ್ಲಿ ಲೋಕ ಸಾಧಾರಣವಾದ ತತ್ತ್ವಗಳನ್ನು ಸರಳವಾಗಿ ರೂಪಿಸಲಾಗಿದೆ. ಬಸವಣ್ಣನವರು ಹೇಳಿರುವಂತೆ 'ಕಳಬೇಡ ಕೊಲಬೇಡ..... ' ವಚನದಂತೆ ಜನ್ನನೂ ತನ್ನ ಕಂದ ಪದ್ಯದಲ್ಲಿ 'ಕೊಲಲುಂ ಪುಸಿಯಲುಂ ಆಗದು ; ಸಲಲಾಗದು ಪರರ ಪಂಡಿರೊಳ್; ಕಳವನಣಂ ಕಳಲಾಗದು; ತೀರದುದಕ್ಕೆ ಅಲವರಲಾಗದು;' ಎಂದು ಸುಂದರವಾಗಿ ನಿರೂಪಿಸಿದ್ದಾನೆ. ಈ ತತ್ತ್ವಗಳು ಕೇವಲ ಜೈನಮತಕ್ಕೆ ಅಲವರಲಾಗದು; ಎಂದು ಸುಂದರವಾಗಿ ನಿರೂಪಿಸಿದ್ದಾನೆ. ಈ ತತ್ತ್ವಗಳು ಕೇವಲ ಜೈನಮತಕ್ಕೆ ಮೀಸಲಾಗಿಲ್ಲ. ಮಾನವರಿಗೆಲ್ಲರಿಗೂ ಅನ್ವಯಿಸುವಂತಹ ತತ್ತ್ವಗಳನ್ನೇ ಸಾಧಾರಣ ಧರ್ಮ ಎಂದು ಹೇಳಲಾಗುತ್ತದೆ. ಆದ್ದರಿಂದಲೇ ಈ ಕಾವ್ಯವು ಕಾವ್ಯಧರ್ಮ ಮತ್ತು ಧರ್ಮಗಳನ್ನು ಸಮನ್ವಯಗೊಳಿಸಿದೆ ಈ ಕಾವ್ಯದ ಇನ್ನೊಂದು ವೈಶಿಷ್ಟ್ಯವೆಂದರೆ ಇಡೀ ಕಾವ್ಯವು (ಕೆಲವು ಪದ್ಯಗಳನ್ನು ಬಿಟ್ಟು) ಕಂದ ಪದ್ಯದಲ್ಲಿದೆ. ಈ ಕಾವ್ಯದಲ್ಲಿ ಅನೈತಿಕ ಪ್ರಣಯದ ವಿಶ್ಲೇಷಣೆ ಕಂಡು ಬರುತ್ತದೆ. ಅಮೃತಮತಿಯ ತಪ್ಪು ಎಷ್ಟೊಂದು ಜನರ ಕಷ್ಟಗಳಿಗೆ ಕಾರಣವಾಯಿತೆಂಬುದನ್ನು ಇಲ್ಲಿ ಕಾಣಬಹುದು. ಮಾನವ ಸಮಾಜದಲ್ಲಿ ಒಬ್ಬರು ಮಾಡುವ ತಪ್ಪು ಅನೇಕರ ಮೇಲೆ ಬೇರೆ ಬೇರೆ ರೀತಿಯಲ್ಲಿ ಪರಿಣಾಮಗಳನ್ನು ಉಂಟು ಮಾಡುತ್ತದೆ ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕು. ಕವಿಯು ತನ್ನ ಕೃತಿಯನ್ನು 'ಶುಭ ಕಥನ' ವೆಂದು ಹೇಳಿಕೊಂಡಿರುವುದು ಉತ್ಪ್ರೇಕ್ಷೆಯಲ್ಲವೆಂದು ತಿಳಿಯಬಹುದು.

ಆ) ಅನಂತನಾಥ ಪುರಾಣವು ತೀರ್ಥಂಕರನ ಚರಿತ್ರೆ. ಇದರಲ್ಲಿ ಪುರಾಣ ಮುಖ್ಯವೇ ಹೊರತು ಕಾವ್ಯತ್ವ ಮುಖ್ಯವಲ್ಲ. ಪುರಾಣಕ್ಕೆ ಕಾವ್ಯ ಅಧೀನವಾಗಿಯೇ ಇರಬೇಕಾಗುತ್ತದೆ. ಈ ಕಾವ್ಯದ ಮೊದಲನೆಯ ಭಾಗದಲ್ಲಿ ಬೆಳಕಿಗೆ ಬಾರದೆ ಹೋದ ಕಾವ್ಯಕಲೆಯು ಎರಡನೆಯ ಭಾಗವಾದ ಚಂಡಶಾಸನನ ಕಥೆಯಲ್ಲಿ ವಿಕಾಸಹೊಂದಿದೆ. ಇದರಿಂದಲೇ ಈ ಕಾವ್ಯಕ್ಕೆ ಮನ್ನಣೆಯೂ ದೊರೆತಿದೆ. ಚಂಡಶಾಸನನ ಮಿತ್ರದ್ರೋಹದಿಂದ ಎಂತಹ ಘೋರ ಪರಿಣಾಮಗಳು ಉಂಟಾದುವು ಎಂಬುದನ್ನು ಇಲ್ಲಿ ನೋಡಬಹುದು. ಇದೂ ಕೂಡ ಅನೈತಿಕ ಪ್ರಣಯದ ಇನ್ನೊಂದು ಮುಖವೆನ್ನಬಹುದು. ಜನ್ನನಲ್ಲಿ ಮನುಷ್ಯನ ಕಾಮಪ್ರೇಮಗಳು ಕುತೂಹಲವನ್ನು ಮೂಡಿಸಿರಬೇಕು ಅಥವಾ ಅವುಗಳ ಬಗ್ಗೆ ಮಾರ್ಗದರ್ಶನ ಮಾಡಬೇಕೆಂಬ ಅಭಿಲಾಷೆಯೂ ಮೂಡಿರಬೇಕು.

ಇ) 'ಅನುಭವ ಮುಕುರ'ವು ಪುಟ್ಟ ಕೃತಿಯಾದರೂ ಕವಿಯು ಉದ್ದೇಶವು ತುಂಬಾ ಉತ್ತಮವಾಗಿದೆ. ಇದು ಕೇವಲ ಕಾಮಶಾಸ್ತ್ರವಾಗಿರದೆ ದಂಪತಿಗಳ ಕೈಪಿಡಿಯೂ ಆಗಿದೆ. ಜೀವನದಲ್ಲಿ ಕಷ್ಟಗಳು ಬಂದರೂ ಅದನ್ನೇ ಚಿಂತಿಸದೆ ಸಂತೋಷದ ಕಡೆಗೂ ಮನಸ್ಸು ಕೊಡಬೇಕೆಂಬುದು ಕವಿಯ ಆಶಯವಾಗಿದೆ. ಇಲ್ಲಿಯೂ ಕೂಡ ಅನೈತಿಕ ಪ್ರೇಮ ಕಾಮಗಳ ಬಗ್ಗೆ ಕವಿಯು ಎಚ್ಚರಿಕೆ ಕೊಟ್ಟಿದ್ದಾನೆ. ಪತಿಯು ಸತಿಯಮ್ಮ, ಸತಿಯು ಪತಿಯನ್ನು ನಿಷ್ಠೆಯಿಂದ ಕಾಣಬೇಕೆಂಬುದು ಕವಿಯ ಬೋಧನೆಯಾಗಿದೆ. ಸ್ತ್ರೀಯರಿಗೆ ಕವಿಯು ಕೊಟ್ಟಿರುವ ಪ್ರಾಶಸ್ತ್ಯವು ಅತ್ಯಂತ ಗಮನಾರ್ಹವಾದ ಅಂಶವಾಗಿದೆ.

### 2.7.4 ಕೃತಿ ವಿಮರ್ಶೆ

ಅ) ಯಶೋಧರ ಚರಿತೆಯು ಗಾತ್ರದಲ್ಲಿ ಚಿಕ್ಕದಾದರೂ ಕನ್ನಡದ ಶ್ರೇಷ್ಠ ಕಾವ್ಯವೆನ್ನಿಸಿಕೊಂಡಿದೆ. ಕವಿಯು ಸಂಪ್ರದಾಯ, ಪದ್ಧತಿಗಳಿಗೆ ಶರಣಾಗದೆ ಕಾವ್ಯವಸ್ತುವನ್ನು ಸಮರ್ಪಕವಾಗಿ, ಔಚಿತ್ಯ

ಪೂರ್ಣವಾಗಿ ನಿರ್ವಹಿಸಿದ್ದಾನೆ. ಲೋಕಸಾಧಾರಣ ಧರ್ಮದ ಕಡೆಗೆ ಒತ್ತು ಬಿದ್ದಿರುವುದರಿಂದ ಮತನಿಷ್ಠ ಕಾವ್ಯವಾಗದೆ ಧರ್ಮನಿಷ್ಠ ಕಾವ್ಯದಂತೆ ಕಾಣುತ್ತದೆ. ಒಂದು ಕಾವ್ಯವು ಮಹಾಕಾವ್ಯ ಎಂಬ ಹೆಸರಿಗೆ ಸಲ್ಲಬೇಕಾದರೆ ಗಾತ್ರವೂ ಕೂಡ ಮುಖ್ಯವಾಗುತ್ತದೆ. ಬೇಲೂರಿನ ಶಿಲಾಬಾಲಿಕೆಗಿಂತ ಗೊಮ್ಮಟೇಶ್ವರನ ಮೂರ್ತಿ ಭವ್ಯವೆನಿಸುತ್ತದೆ. ಅದಕ್ಕೆ ಗಾತ್ರವೂ ಒಂದು ಕಾರಣವಾಗುತ್ತದೆ. ನಾವು ಅರಮನೆ ಎಂದು ಕರೆಯಬೇಕಾದರೆ, ಸಿಂಹಾಸನ ಎಂದು ಹೇಳಬೇಕಾದರೆ ಗಾತ್ರವೂ ಮುಖ್ಯವೆಂದು ತಿಳಿಯುತ್ತೇವೆ. ಈ ಕಾರಣದಿಂದ ಯಶೋಧರ ಚರಿತೆ ಮಹಾಕಾವ್ಯ ಎನ್ನಿಸಿಕೊಂಡಿಲ್ಲ, ಶ್ರೇಷ್ಠಕಾವ್ಯ ಎನ್ನಿಸಿಕೊಂಡಿದೆ.

ಆ) ಅನಂತನಾಥ ಪುರಾಣದಲ್ಲಿರುವ ಮೊದಲನೆಯ ಭಾಗವಾದ ಅನಂತನ ಜೀವನ ಚರಿತ್ರೆಯು ಕಾವ್ಯವಾಗುವುದಕ್ಕಿಂತ ಹೆಚ್ಚಾಗಿ ಒಂದು ಸಕ್ರಮ ನಿರೂಪಣೆಯಾಗುತ್ತದೆ. ಪ್ರತಿಭೆಗಿಂತ ಪಾಂಡಿತ್ಯಕ್ಕೆ ಅವಕಾಶವು ದೊರೆತಿದೆ. ಅನಂತನ ಕಥೆಯ ಮಧ್ಯದಲ್ಲಿಯೇ ಸುಪ್ರಭರ ಕಥೆಯನ್ನೂ ಸೇರಿಸಿರುವುದರಿಂದ ಬಂಧದಲ್ಲಿ ಕೊಂಚ ಶಿಥಿಲತೆ ಕೊಂಡುಬರುತ್ತದೆ. ಅನಂತರ ಬಾಲಲೀಲೆಯಾಗಲೀ, ಮಾನವ ಸಹಜ ಅರಿಷಡ್ವರ್ಗಾದಿಗಳಿಂದ ಉಂಟಾಗುವ ಏರುಪೇರುಗಳ ಚಿತ್ರಣವಾಗಲೀ ಇದರಲ್ಲಿ ಕಂಡು ಬರುವುದಿಲ್ಲ. ಹದಿನೆಂಟು ವರ್ಣನೆಗಳು ಇರಬೇಕು ಎಂಬ ಹಟದಿಂದ ಕವಿಯು ವೇಶ್ಯವಾಟಿಕೆಯನ್ನು ವರ್ಣಿಸುತ್ತಾನೆ. ಅದರಲ್ಲೂ ಅನಂತನಾಥನು ಹೊರಗೆ ಹೊರಟು ಆ ಮಾರ್ಗವಾಗಿಯೇ ಹೋಗಿರುವುದು ಹಿತವೆನ್ನಿಸು ವುದಿಲ್ಲ. ಕಥೆಗೆ ಅನಿವಾರ್ಯವಾಗಿ ಇರಬೇಕಾದ ವರ್ಣನೆ ಇದ್ದರೆ ಅದಕ್ಕೆ ಹೆಚ್ಚು ಬೆಲೆಯಿರುತ್ತದೆ ಯಲ್ಲವೆ. ಚಂಡಶಾಸನನ ಕಥೆಯು ಹೆಚ್ಚು ಕಲಾತ್ಮಕವಾಗಿದೆ ಎನ್ನಿಸುತ್ತದೆ. ಈ ಕಾವ್ಯದಲ್ಲಿ ಈ ಭಾಗವು ತುಂಬಾ ಸೊಗಸಾದ ಕಥನ ಕಲೆಯಿಂದ ಕೂಡಿದೆ. ಈ ಭಾಗದಲ್ಲಿ ಯಶೋಧರ ಚರಿತೆಯ ಮಹತ್ವವನ್ನು ಕಾಣುತ್ತೇವೆ. ಇದರಿಂದ ಅನಂತನಾಥಪುರಾಣ ಕಾವ್ಯಕ್ಕೆ ಒಂದು ತೂಕ ಬಂದಂತಾಗಿದೆ. ಇಡೀ ಕಾವ್ಯವು ಇಂತಹ ಕಲಾತ್ಮಕತೆಯಿಂದ ಕೂಡಿದ್ದರೆ ಇನ್ನೂ ಹೆಚ್ಚು ಬೆಲೆಯು ಸಲ್ಲುತ್ತಿತ್ತು ಎನ್ನುವುದು ವಿಮರ್ಶಕರ ಅಭಿಪ್ರಾಯವಾಗಿದೆ.

ಇ) ಅನುಭವ ಮುಕುರವು ಏಕಾಂಕ ನಾಟಕದಂತೆ ಯಾವ ವಿಭಾಗವೂ ಇಲ್ಲದ ಇಡಿಯಾದ ಗ್ರಂಥವಾಗಿದೆ. ಇದರಲ್ಲಿ ವಸ್ತು ವಿಷಯದ ನಿರ್ವಹಣೆ ಇನ್ನೂ ಸುಧಾರಿಸಬೇಕಾಗಿತ್ತು ಎಂಬ ಅಭಿಪ್ರಾಯವಿದೆ. ಕವಿಯು ಇದರಲ್ಲಿ ೪೯ ಛಂದೋ ಭೇದಗಳನ್ನು ಬಳಸಿದ್ದಾನೆ. ವಿಷಯಕ್ಕಿಂತ ಛಂದಸ್ಸಿನ ಕಡೆಗೇ ಕವಿಯ ಗಮನ ಹರಿದಿರಬಹುದು ಎನ್ನಿಸುತ್ತದೆ. ಕವಿಯ ಧಾರ್ಮಿಕ ದೃಷ್ಟಿಯು ಇಲ್ಲಿಯೂ ವ್ಯಕ್ತವಾಗಿದೆ. ಒಬ್ಬ ದೊಡ್ಡ ಕವಿಯ ಸಾಮಾನ್ಯ ಕೃತಿಯೆಂದು ತಿಳಿಯಲಾಗಿದೆ.

ಇದುವರೆಗೆ ಜನ್ನ ಕವಿಯ ಮೂರು ಕೃತಿಗಳ ಬಗ್ಗೆ ಹಲವಾರು ವಿಷಯಗಳನ್ನು ತಿಳಿದು ಕೊಂಡಿದ್ದೀರಿ. 'ಯಶೋಧರ ಚರಿತೆ' ಮತ್ತು 'ಚಂಡಶಾಸನನ ಕಥೆ' ಇವೆರಡೂ ಅನೈತಿಕ ಪ್ರಣಯದ ಪರಿಣಾಮಗಳನ್ನು ತುಂಬಾ ಚೆನ್ನಾಗಿ ತಿಳಿಸುತ್ತವೆ. ಒಂದರಲ್ಲಿ ಹೆಣ್ಣಿನ ಅನೈತಿಕ ವರ್ತನೆ, ಇನ್ನೊಂದರಲ್ಲಿ ಗಂಡಿನ ಅನೀತಿಯುತ ವರ್ತನೆಗಳನ್ನು ಕಾಣುತ್ತೇವೆ. ಮನುಷ್ಯರಲ್ಲಿ ಕಾಮ ಮತ್ತು ಪ್ರೇಮಗಳು ಬಹಳ ಪ್ರಬಲವಾದ ಭಾವಗಳು. ಮನುಷ್ಯನನ್ನು ಪ್ರಧಾನವಾಗಿ ಭಾವುಕ ಜೀವಿ ಎನ್ನುತ್ತಾರೆ, ಕಾಮಕ್ರೋಧಾದಿಗಳ ಉರುಬಿಗೆ ಸಿಕ್ಕಿ ಏನೇನೋ ಮಾಡಿಬಿಡುವ ಜೀವಿಯಾಗಿದ್ದಾನೆ. ಜನ್ನ ಕವಿಯು ಮನುಷ್ಯನ ತಪ್ಪನ್ನು ಇಬ್ಬರ ಮೇಲೆ ಹಾಕಿಬಿಟ್ಟಿದ್ದಾನೆ. ಒಬ್ಬ ಮನ್ಮಥ ಇನ್ನೊಬ್ಬ ವಿಧಿ. ಮನಸಿಜನಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ? ಎಂದು ಅನುಕಂಪದಿಂದ ಹೇಳುತ್ತಾನೆ. ಜನ್ನಕವಿಯು ಇನ್ನೂ ಮುಂದಕ್ಕೆ ಹೋಗಲಾರದವನಂತೆ ಅಮೃತಮತಿ ಮತ್ತು ಚಂಡಶಾಸನರನ್ನು ನೋಡುತ್ತಾ ನಿಲ್ಲುತ್ತಾನೆ. ಆ ಪಾತ್ರಗಳನ್ನು ತನ್ನ ಸೂತ್ರದ ಬೊಂಬೆಗಳನ್ನಾಗಿಸದೆ ಅವರು ಹೇಗೆ ವರ್ತಿಸುತ್ತಾರೆಂಬುದನ್ನು ನಮಗೆ ನಿರ್ದುಷ್ಟವಾಗಿ ತಿಳಿಸುತ್ತಾನೆ. ಎಚ್ಚೆತ್ತು ಕೊಳ್ಳಬೇಕಾದವರು ಓದಗರು, ಸಹೃದಯರು, ಹಾಗೆ ಎಚ್ಚೆತ್ತು ಕೊಂಡರೆ ಕವಿಯ ಶ್ರಮವು ಸಾರ್ಥಕವಾಗುತ್ತದೆ.

## 2.8 ಆಂಡಯ್ಯ : ಕಾಲ ದೇಶ ಕೃತಿ ವಿಚಾರ

### 2.8.1 ಕಾಲ

ಆಂಡಯ್ಯ ಕವಿಯು ತನ್ನ ಕಾಲದ ಸ್ಥಳದ ಬಗ್ಗೆ ಎಲ್ಲಿಯೂ ಹೇಳಿಕೊಂಡಿಲ್ಲ. ಆದರೆ ನಮಗೆ ದೊರೆಯುವ ಆಧಾರವೆಂದರೆ ಅವನು ಯಾವ ಯಾವ ಕವಿಗಳನ್ನು ಸ್ಮರಿಸಿದ್ದಾನೆ ಎಂಬುದನ್ನು ನೋಡಿ ಊಹೆಮಾಡಬೇಕಾಗುತ್ತದೆ. ಆಂಡಯ್ಯನು ಜನ್ನ ಕವಿಯನ್ನು ಸ್ಮರಿಸಿದ್ದಾನೆ. ಆದ್ದರಿಂದ ಅವನು ಕ್ರಿ.ಶ. ೧೨೩೦ರ ವೇಳೆಗೆ ಕಾವ್ಯಕ್ಷೇತ್ರದಲ್ಲಿ ಕ್ರಿಯಾಶೀಲನಾಗಿದ್ದನೆಂದು ತಿಳಿಯಬಹುದು. "ಸೂಕ್ತಿ ಸುಧಾರ್ಣವ"ದ ಮಲ್ಲಿಕಾರ್ಜುನನು ಆಂಡಯ್ಯನ ಪದ್ಯಗಳನ್ನು ತನ್ನ ಕೃತಿಯಲ್ಲಿ ಸೇರಿಸಿರುವುದರಿಂದ ಕ್ರಿ.ಶ. ೧೨೪೫ರ ವೇಳೆಗೆ ಆಂಡಯ್ಯನು ಕೃತಿ ರಚನೆ ಮಾಡಿರಬೇಕು. ಇದರ ಜೊತೆಗೆ ಐತಿಹಾಸಿಕ ಸಂಗತಿಗಳು ಇಡೀ ಕಾವ್ಯದಲ್ಲೆಲ್ಲಾ ಹರಡಿಕೊಂಡು ಅನೇಕ ಸುಳುಹುಗಳನ್ನು ಕೊಡುತ್ತವೆ. ಈ ಎಲ್ಲ ಆಧಾರಗಳಿಂದ ಆಂಡಯ್ಯನ ಕಾಲವನ್ನು ಕ್ರಿ.ಶ. ಸುಮಾರು ೧೨೧೭ ಎಂದು ನಂಬಲಾಗಿದೆ.

### 2.8.2 ದೇಶ ವಿಚಾರ

ಆಂಡಯ್ಯ ಎಂಬ ಹೆಸರು ತುಂಬಾ ವಿಚಿತ್ರವಾಗಿ ಕೇಳಿಸಬಹುದಲ್ಲವೆ. ಬಹುಶಃ ಅದು ಆಂಡಯ್ಯ ಅಂದರೆ (ಅಂಡ +ಅಯ್ಯ) ಎಂಬ ರೂಪದಿಂದ ಆಂಡಯ್ಯ ಎಂಬ ರೂಪನ್ನು ತಾಳಿರಬೇಕು. ಅಥವಾ ಆದಯ್ಯ ಎಂಬ ಹೆಸರಿನಿಂದ ಆಂಡಯ್ಯ ಎಂಬ ಹೆಸರು ಮೂಡಿರಬಹುದು. ಅಥವಾ ತಮಿಳು ಮೂಲದಿಂದ ಈ ಹೆಸರು ಬಂದಿರಬಹುದು. ತಮಿಳಿನಲ್ಲಿ ಆಂಡವನ್ ಎಂಬ ಶಬ್ದವನ್ನು ಕೇಳಿಯೇ ಇದ್ದೀರಿ. ಈ ಎಲ್ಲ ವಿವರಣೆಗಳ ಪೈಕಿ ಅಂಡಯ್ಯ (ಬ್ರಹ್ಮಯ್ಯ) ಎಂಬ ಶಬ್ದದಿಂದಲೇ ಆಂಡಯ್ಯ ಎಂಬುದು ಬಂದಿರಬೇಕೆಂದು ನಂಬಲಾಗಿದೆ.

ಆಂಡಯ್ಯನು ಕರಣಿಕರ (ಗುಮಾಸ್ತರ) ವಂಶದಲ್ಲಿ ಜನ್ಮ ತಾಳಿರಬೇಕು. ಕವಿಯು ಜೈನ ಮತಾನುಯಾಯಿಯಾಗಿರಬೇಕು ಎಂದು ತಿಳಿಯಲಾಗಿದೆ. ಮೊದಲೇ ಹೇಳಿದಂತೆ ಆಂಡಯ್ಯನು ತಾನು ಎಲ್ಲಿ ಹುಟ್ಟಿದೆನೆಂಬುದನ್ನು ಹೇಳಿಕೊಂಡಿಲ್ಲ. ಆತನಿಗಿರುವ ಕನ್ನಡ ನುಡಿ ಮತ್ತು ನಾಡಿನ ಪ್ರೀತಿಯನ್ನು ನೋಡಿದರೆ ಬಲವಾಸಿ ಪ್ರಾಂತದಲ್ಲಿ ಹುಟ್ಟಿ ಬೆಳೆದಿರಬೇಕೆಂದು ಕೋರುತ್ತದೆ.

### 2.8.3 ಕೃತಿಗಳು

ಆಂಡಯ್ಯನು ರಚಿಸಿರುವ ಕೃತಿಯ ಹೆಸರು 'ಕಬ್ಬಿಗರ ಕಾವ' ಆದರೆ ಇದು ಕಾವ್ಯದ ಹೆಸರಲ್ಲವೆಂದೂ ಕಾವ್ಯದ ಹೆಸರು 'ಕಾವನ ಗೆಲ್ಲಂ' ಎಂದು ಹೇಳುವವರಿದ್ದಾರೆ, ಸಂಸ್ಕೃತ ವಿದ್ವಾಂಸರು ಅದಕ್ಕೆ 'ಮದನ ವಿಜಯ' ಎಂಬ ಹೆಸರು ಕೊಟ್ಟಿದ್ದಾರೆ. 'ಕಾವನ ಗೆಲ್ಲಂ' ಎಂದರೆ ಮನ್ಮಥನ ವಿಜಯ. ಕವಿಯು ಈ ಹೆಸರನ್ನೇ ಕೊಟ್ಟಿದ್ದರೂ ಪರಂಪರೆಯಿಂದ ಎಂಬ ರೂಢಿಗೆ ಬಂದಿದೆ.

## ಕಬ್ಬಿಗರ ಕಾವಂ

### ಆಕರ

ಕಾಳಿದಾಸನ 'ಕುಮಾರ ಸಂಭವ' ಕಾವ್ಯವು 'ಕಬ್ಬಿಗರ ಕಾವಂ' ಕೃತಿಗೆ ಪ್ರೇರಕ ಎಂದು ಕರೆಯಬಹುದು. ಏಕೆಂದರೆ 'ಕಾಮದಹನ' ವಸ್ತುವನ್ನು ಆಂಡಯ್ಯನು ತನಗೆ ಬೇಕಾದಂತೆ ಬದಲಾಯಿಸಿ ಕೊಂಡಿರುವುದರಿಂದ ಕಾಳಿದಾಸನ 'ಕುಮಾರ ಸಂಭವ'ವನ್ನಾಗಲೀ, ಹರಹರನ 'ಗಿರಿಜಾ ಕಲ್ಯಾಣ'ವನ್ನಾಗಲೀ ನೇರವಾದ ಆಕರವೆಂದು ಹೇಳುವುದು ಉಚಿತವಲ್ಲ. ಕಾಳಿದಾಸ, ಹರಿಹರ ಕವಿಗಳ ಕಾವ್ಯಗಳಲ್ಲಿ ಶಿವನು ಗೆಲ್ಲುತ್ತಾನೆ. ಇಲ್ಲಿ ಮನ್ಮಥ ಗೆಲ್ಲುತ್ತಾನೆ. ಆದ್ದರಿಂದ ಆಂಡಯ್ಯನು ಸ್ವತಂತ್ರವಾಗಿ ಕಥಾವಸ್ತುವನ್ನು ನಿರ್ವಹಿಸಿದ್ದಾನೆ ಎನ್ನಬಹುದು.

## ಕಥಾವಸ್ತು

ಕಂಪಿನ ಪೊಳಲೆಂಬ ನಾಡಿನಲ್ಲಿ ಕರ್ಪುವಿಲ್ಲ ಎಂಬ ರಾಜನು ಆಳುತ್ತಿದ್ದನು. ಆತನ ಪತ್ನಿಯ ಹೆಸರು ಇಚ್ಛೆಗಾರ್ತಿ. ಈ ಯಶಸ್ವೀ ದಂಪತಿಗಳು ಸುಖವಾಗಿರುವಾಗ ತಂಬೆಲರು 'ಪಕ್ಕಿ'ಎಂಬ ದೂತಿಯನ್ನು ಕರೆದುಕೊಂಡು ಬರುತ್ತಾನೆ. ಈ 'ಪಕ್ಕಿ'ಯು ಕರ್ಪುವಿಲ್ಲನಿಗೆ ಒಂದು ವಿಶೇಷ ಸುದ್ದಿಯನ್ನು ಕೊಡುತ್ತದೆ. ಶಿವನು ಚಂದ್ರನನ್ನು ಸೆರೆ ಹಿಡಿದನೆಂಬುದೇ ಆ ಸುದ್ದಿ. ಕರ್ಪುವಿಲ್ಲನಿಗೆ ಭಯಂಕರ ಕೋಪವು ಬರುತ್ತದೆ. ಶಿವನ ಮೇಲಿನ ಕೋಪಕ್ಕೆ 'ಸೂರ್ಯನನ್ನು ಸಮುದ್ರದಲ್ಲಿ ಮುಳುಗಿಸುತ್ತೇನೆ, ದಿಗ್ಗಜಗಳನ್ನು ಕೊಲ್ಲುತ್ತೇನೆ, ಮೇರುವನ್ನು ನೂಕುತ್ತೇನೆ --' ಇತ್ಯಾದಿ ಮಾತುಗಳನ್ನು ಗುಡುಗುತ್ತಾನೆ. ರಾಜನ ಆವೇಶವನ್ನು ವಸಂತನು ತಡೆದು ದೂತನನ್ನು ಕಳುಹಿಸಿ ವಿಷಯವನ್ನು ತಿಳಿಸಿ ಸಂಧಾನ ನಡೆಸಬೇಕೆಂದು ಕೋರುತ್ತಾನೆ. ತಂಗಾಳಿ ಎಂಬ ದೂತನು ತನ್ನ ಪ್ರಯತ್ನದಲ್ಲಿ ವಿಫಲನಾಗುತ್ತಾನೆ. ಯುದ್ಧ ಅನಿವಾರ್ಯವಾಗುತ್ತದೆ.

ಕರ್ಪುವಿಲ್ಲನು ಸೈನ್ಯಸಮೇತ ವಿಜಯಯಾತ್ರೆಯನ್ನು ಕೈಗೊಳ್ಳುತ್ತಾನೆ. ಆತನ ಮಾರ್ಗದಲ್ಲಿ ತಪಸ್ವಿಯೊಬ್ಬನು ಅಡ್ಡವಾಗಿ ನಿಂತಿರುವುದನ್ನು ಕಂಡು ಅವನನ್ನು ಕೊಲ್ಲಲು ಆಯುಧವನ್ನು ಎತ್ತಿದಾಗ ವಸಂತನು ತಡೆದು. ನಿನ್ನ ಪರಾಕ್ರಮವನ್ನು ತ್ರಿಶೂಲಿಯ ಮೇಲೆ ಮೆರೆಯುವುದು ಸರಿಯಾದುದು ಎಂದು ಹೇಳುತ್ತಾನೆ. ಕರ್ಪುವಿಲ್ಲನು ತಪಸ್ವಿಗೆ ತಲೆಬಾಗಿ ಮುಂದೆ ನಡೆಯುತ್ತಾನೆ.

ಕರ್ಪುವಿಲ್ಲನು ಯುದ್ಧಕ್ಕೆ ಬರುತ್ತಿರುವುದನ್ನು ತಿಳಿದ ಶಿವನು ಕೋಪಗೊಂಡು ವೀರಭದ್ರನನ್ನು ಕಳುಹಿಸುತ್ತಾನೆ. ಆದರೆ ಯುದ್ಧದಲ್ಲಿ ವೀರಭದ್ರನು ಸೋಲುತ್ತಾನೆ. ಸೈನ್ಯವೆಲ್ಲವೂ ನಾಶವಾಗುತ್ತದೆ. ಶಿವನು ಏಕಾಂಗಿಯಾಗಿ ಯುದ್ಧವನ್ನು ಮುಂದುವರೆಸುತ್ತಾನೆ. ಕರ್ಪುವಿಲ್ಲನ ಬಾಣಗಳು ಶಿವನಿಗೆ ತಾಗಿ ಅವನು ಅರೆವೆಣ್ಣಾಗುತ್ತಾನೆ. (ಅರ್ಧ ಹೆಣ್ಣು) ಇದರಿಂದಾಗಿ ಶಿವನು ಕರ್ಪುವಿಲ್ಲನಿಗೆ 'ನೀನು ನಿನ್ನ ಪ್ರಿಯೆಯನ್ನು ಅಗಲಿ, ಯಾರಿಗೂ ತಿಳಿಯದ ಜಾಗದಲ್ಲಿ ತಲೆಮರೆಸಿಕೊಂಡಿರು' ಎಂದು ಶಾಪವನ್ನು ಕೊಡುತ್ತಾನೆ.

ಶಿವನ ಶಾಪದಿಂದಾಗಿ ಕರ್ಪುವಿಲ್ಲನು ಪೂವಿನ ಪೊಳಲಿನಲ್ಲಿ ನನೆಯಂಬನೆಂಬ ರಾಜನಾಗಿರುತ್ತಾನೆ. ಒಂದು ದಿನ ಅವನು ತನ್ನ ತೋಟದಲ್ಲಿ ಅಪ್ಸರೆಯನ್ನು ಕಾಣುತ್ತಾನೆ. ಅವಳು ಕರ್ಪುವಿಲ್ಲನಾಗಿದ್ದವನು ನನೆಯಂಬನಾಗಿ ಹುಟ್ಟಿದ ವಿಷಯವನ್ನು ಆದ್ಯಂತವಾಗಿ ಹೇಳುತ್ತಾಳೆ. ಈ ಮಾತನ್ನು ಕೇಳಿದ ಗಿಳಿಯು ಕಂಪಿನ ಪೊಳಲಿಗೆ ಹಾರಿಹೋಗಿ ಇಚ್ಚೆಗಾರ್ತಿಗೆ ಸುದ್ದಿಯನ್ನು ತಿಳಿಸುತ್ತದೆ. ಈ ಮಧ್ಯೆ ಅಪ್ಸರೆಯ ಮಾತನು ಪತಿಯನ್ನು ಕಂಡು ಹರ್ಷಗೊಳ್ಳುತ್ತಾಳೆ. ರಾಜಧಾನಿಯಲ್ಲಿ ಮೆರವಣಿಗೆ ನಡೆಯುತ್ತದೆ. ಜನರು ತೃಪ್ತರಾಗುತ್ತಾರೆ.

ಇದಿಷ್ಟು ಈ ಕಾವ್ಯದ ಕಥಾಭಾಗ. ಇದರಲ್ಲಿ ಒಟ್ಟು ೨೭೨ ಪದ್ಯಗಳಿವೆ. ಇದು ಚಂಪೂ ಛಂದಸ್ಸಿನಲ್ಲಿದೆ, ಅಂದರೆ ಗದ್ಯ ಪದ್ಯ ಮಿಶ್ರಣವಾದ ಛಂದೋರೂಪ. ಇದರಲ್ಲಿ ಅಧ್ಯಾಯಗಳ ವಿಭಜನೆ ಇಲ್ಲ.

## ಭಾಷೆ ಶೈಲಿ

ಆಂಡಯ್ಯನ ಕಾವ್ಯದ ಹೆಗ್ಗಳಿಕೆ ಇರುವುದೇ ಈ ವಿಷಯದಲ್ಲಿ. ಪಾತ್ರ, ಘಟನೆ, ಸನ್ನಿವೇಶ ಇತ್ಯಾದಿ ಅಂಶಗಳಲ್ಲಿ ಕವಿಯ ನಿರ್ವಹಣೆಯು ತುಂಬಾ ಗಮನಾರ್ಹವಾಗಿಲ್ಲ. ಆದರೆ ಕಾವ್ಯದ ಭಾಷೆಯ ಬಗ್ಗೆ ಯಾರೇ ಆಗಲಿ ವಿಸ್ಮಯ ಪಡುವಂತಹ ಸಾಧನೆಯನ್ನು ಮಾಡಿದ್ದಾನೆ. ಆಂಡಯ್ಯನು ತನ್ನ ಕಾವ್ಯವನ್ನು ಅಚ್ಚಗನ್ನಡದಲ್ಲಿ ಬರೆದಿರುವುದು ಒಂದು ಗಮನಾರ್ಹ ಸಂಗತಿಯಾಗಿದೆ. ಅವನು ಕನ್ನಡದ ಅಭಿಮಾನಿಯೇ ಹೊರತು ಸಂಸ್ಕೃತ ದ್ವೇಷಿಯಲ್ಲ. ಕೆಲವು ಮರಾಠಿ ಶಬ್ದಗಳನ್ನು ಬಳಸಿರುವುದುಂಟು. ಸಂಸ್ಕೃತದ ತದ್ಭವಗಳೂ ಕಾವ್ಯದಲ್ಲಿವೆ. ಸಂಸ್ಕೃತವನ್ನು ಬಿಟ್ಟು ಕಾವ್ಯವನ್ನು ರಚಿಸಲು ಸಾಧ್ಯವಿಲ್ಲ

ಎನ್ನುವವರಿಗೆ ಉತ್ತರ ರೂಪವಾಗಿ ಆಂಡಯ್ಯ ಈ ಕಾವ್ಯವನ್ನು ಸಂಸ್ಕೃತದ ಶಬ್ದಗಳನ್ನು ಬಳಸದೆ ಬರೆಯಲು ಹೊರಟಿದ್ದಾನೆ. ಆತನು ಕೊಟ್ಟಿರುವ ಹೆಸರುಗಳಲ್ಲಿಯೂ ಸಂಸ್ಕೃತವು ಪ್ರವೇಶಿಸದಂತೆ ವೀರನಿಷ್ಠೆಯನ್ನು ಮೆರೆದಿದ್ದಾನೆ. ನಗೆಗಾರ (ವಿದೂಷಕ), ಕರ್ಬುವಿಲ್ಲ (ಕಬ್ಬಿನ ಬಿಲ್ಲು ಹಿಡಿದವನು), ನನೆಯಂಬ (ಹೂಬಾಣ ಬಿಡುವವನು), ಪೂವಿನ ಪೊಳಲ್ (ಹೂವಿನ ಪಟ್ಟಣ), ಕಂಪಿನ ಪೊಳಲ್ (ಸುಗಂಧದ ಪಟ್ಟಣ), ಇಚ್ಚೆಗಾರ್ತಿ( ಆಸೆ ಪಡುವವಳು),ಇತ್ಯಾದಿ. ಆಂಡಯ್ಯನ ಕನ್ನಡ ಒಲವು ಇಷ್ಟಕ್ಕೆ ಮುಗಿಯಲಿಲ್ಲ. ಸಮಾಸಗಳನ್ನು ಬಿಡಿಸಿ ಕನ್ನಡ ಶಬ್ದಗಳನ್ನು ಸೇರಿಸಿದ್ದಾನೆ. ಕಡಲೊಳ್ ಪಟ್ಟಂ, ಆನೆಮೆಯ್ಯಾತ, ಗಾಳಿವಟ್ಟೆ, ಪೊಡೆಯಲರ ಇತ್ಯಾದಿ ನುಡಿಗಟ್ಟುಗಳನ್ನು ಕಾಣುತ್ತೇವೆ. ಹೀಗೆ ಆಂಡಯ್ಯನ ಕಾವ್ಯಭಾಷೆಯು ವಿಶಿಷ್ಟವಾಗಿದೆ ಎಂದು ಹೇಳಬೇಕಾಗಿದೆ.

## ಶೈಲಿ

ಆಂಡಯ್ಯನ ಕಾವ್ಯದ ಭಾಷೆ ಅಚ್ಚಗನ್ನಡವೆಂದು ನೋಡಿದ್ದೇವಷ್ಟೆ. ಕವಿಯ ಶೈಲಿಯು ಯಾವಾಗಲೂ ಅವನ ಕಾವ್ಯಭಾಷೆಯನ್ನು ಅವಲಂಬಿಸಿ ರೂಪು ತಾಳುತ್ತದೆ. ನಾವು ಒಬ್ಬ ಕವಿಯ ಶೈಲಿಯನ್ನು ಹೇಗೆ ಗುರುತಿಸುತ್ತೇವೆ. ಕವಿಯು ಯಾವ ಭಾಷೆಯಲ್ಲೇ ಬರೆಯಲಿ ಅದರಲ್ಲಿ ಕೆಲವು ಅಂಶಗಳು ಅವನೊಬ್ಬನಿಗೇ ದಕ್ಕಿವೆ ಎನ್ನುವ ಭಾವನೆಯು ನಮ್ಮಲ್ಲಿ ಮೂಡುವಂತಾದರೆ ಅಂತಹ ಕವಿಗೆ ಸ್ವಂತಶೈಲಿ ಇದೆ ಎನ್ನುತ್ತೇವೆ. ಈ ದಿಕ್ಕಿನಲ್ಲಿ ಆಲೋಚಿಸಿದರೆ ಆಂಡಯ್ಯನಿಗೆ ಸ್ವಂತ ಶೈಲಿ ಇರುವುದು ಕಂಡುಬರುತ್ತದೆ. ಶೈಲಿಯನ್ನು ಗುರುತಿಸಲು ನೆರವಾಗುವ ಅಂಶಗಳಾವುವು ನೋಡಿ-ಅವನ ದೇಸಿ (ಆಡುನುಡಿಗಳು), ನಾಣ್ಣುಡಿಗಳು, ಮತ್ತು ಚಮತ್ಕಾರದ ಮಾತುಗಳು. ಗ್ರಾಮಾಂತರ ಪ್ರದೇಶದವರು ಬಳಸುವ 'ಗಾಡಿಯ ಮೂಕಿ (ಮೂಂಕು), ಅರಿಕಾಲು (ಅರಗೀಲ್), ಪತ್ತುಗೆ (ಜೊತ್ತೆ) ನೊಗ, ಕಣ್ಣಿ' ಇತ್ಯಾದಿ ಮಾತುಗಳು ಓದುಗರನ್ನು ಹಳ್ಳಿಗಳ ಪರಿಸರಕ್ಕೆ ಕರೆದುಕೊಂಡು ಹೋಗುತ್ತದೆ.

ಆಂಡಯ್ಯನ ಸರಳವಾದ ಶೈಲಿ, ಕೆಲವು ಕಡೆ ಮಾಲೋಪಮೆಗಳನ್ನು ಪ್ರಯೋಗಿಸಿದ್ದಾನೆ. ಅಂತಹ ಆಂಡಯ್ಯನು ಅಸಹಜವಾಗಿ ಬರೆದಿರುವಂತೆ, ಕೃತಕವಾಗಿರುವಂತೆ ಕಂಡು ಬರುತ್ತದೆ. ಅಚ್ಚಗನ್ನಡ ಕವಿ ಸರಳ ಶೈಲಿಯನ್ನೇ ಒಲಿಯಬೇಕು. ಇಲ್ಲವಾದರೆ ಅನ್ಯೋನ್ಯತೆ ಅಸ್ಪಷ್ಟವಾಗಿ ಬಿಡುತ್ತದೆ.

## ಕೃತಿ ಮಹತ್ವ

ಆಂಡಯ್ಯನು ಚಂಪೂ ಛಂದಸ್ಸನ್ನು ಬಳಸಿಕೊಂಡಿದ್ದರೂ, ಆರಿಸಿರುವ ವಸ್ತು ಮತ್ತು ಬಳಸಿರುವ ತುಂಬಾ ವಿಶಿಷ್ಟವಾದುದು. ಇದೇ ಆತನ ಕೃತಿಯ ಮಹತ್ವ, ಆತನ ನಂತರ ಬಂದ ಯಾವ ಕವಿಯು ಹೀಗೆ ಕಾವ್ಯರಚನೆ ಮಾಡಲಿಲ್ಲ. ಕೆಲವು ಕವಿಗಳ ಮೇಲೆ ಈ ಕವಿಯ ಪ್ರಭಾವ ಬೀಳದೆ ಈ ಕಾವ್ಯದಲ್ಲಿ ಗುರುತಿಸಲೇ ಬೇಕಾದ ಮಹತ್ವ ಪೂರ್ಣವಾದ ಅಂಶವೊಂದಿದೆ. ಅದು ಯಾವುದೆಂದರೆ ಆಗಿರುವ ದೇಶ ಪ್ರೇಮ. ಕನ್ನಡ ನಾಡಿನ ಪ್ರಕೃತಿ ಸೌಂದರ್ಯವನ್ನು ತುಂಬು ಹೃದಯದಿಂದ ಆಗುತ್ತಾನೆ. 'ಕನ್ನಡ ಮೆನಿಪ್ಪಾನಾಡು ಚೆಲ್ವಾಯ್ತು'ಎಂದು ಘೋಷಿಸುತ್ತಾನೆ. ಹಲವು ನಾಲಗೆಗಳನ್ನು ಆದಿಶೇಷನೂ ಕೂಡ ಈ ನಾಡಿನ ಚೆಲುವನ್ನು ಬಣ್ಣಿಸಲಾರ ಎಂದು ಧೈರ್ಯವಾಗಿ ಹೇಳುತ್ತಾನೆ. ಮಲ್ಲಿಗೆಯಲ್ಲದೆ, ಸಂಪಗೆಯಲ್ಲದೆ, ದಾಳಿಂಬವಲ್ಲದೆ, ಒಪ್ಪುವ ಚೆಂದೆಂಗಲ್ಲದೆ. ಮಾವಲ್ಲದೆ. ಕೌಂಗಲ್ಲದೆ, ಗಿಡಮರಗಳಿಲ್ಲಾ ನಾಡೊಳ್'ಎನ್ನುತ್ತಾನೆ, ಎಳೆಬಳ್ಳಿ ಹಬ್ಬದ ಮರ, ಕೊಳವಿಲ್ಲದ ತೋಟ, ಕೋಗಿಲೆಯಲ್ಲದ ಎಳಮಾವು, ದುಂಬಿ, ಹಂಸಗಳಿಲ್ಲದ ಸರೋವರ, ಕನ್ನಡನಾಡಿನಲ್ಲಿಲ್ಲ ಎನ್ನುತ್ತಾನೆ. ನಂತರ ಈ ಪ್ರಮಾಣದಲ್ಲಿ ಕನ್ನಡ ನಾಡುನುಡಿಗಳ ಬಗ್ಗೆ ಉಬ್ಬುಬ್ಬಿ ನುಡಿಯುವ ಇನ್ನೊಬ್ಬ ಸಿಗುವುದಿಲ್ಲ ಎನ್ನಬಹುದು.

## 2.8.4 ಕೃತಿ ವಿಮರ್ಶೆ

ಆಂಡಯ್ಯ ಬಳಸಿರುವ ಭಾಷೆ, ಶೈಲಿ, ತೋರಿಸಿರುವ ನಾಡುನುಡಿಗಳ ಪ್ರೇಮ ಇವೆಲ್ಲವೂ ಸರಿಯೆ. ಆದರೆ ಇವುಗಳಿಂದಲೇ ಒಂದು ಕಾವ್ಯ ಶ್ರೇಷ್ಠ ಕೃತಿಯಾಗಲು ಸಾಧ್ಯವಿಲ್ಲ. ಪಾತ್ರವೈವಿಧ್ಯ.

ನಾಟಕೀಯತೆ, ಜೀವನಾನುಭವದ ವಿಸ್ತಾರ, ರಸ ಧ್ವನಿಗಳ ಅಸ್ತಿತ್ವ, ದೊಡ್ಡ ಜೀವನ ದರ್ಶನ ಇವೆಲ್ಲವೂ ಮುಖ್ಯವಾಗುತ್ತವೆ. ವಸ್ತು, ವೈವಿಧ್ಯವಿಸ್ತಾರಗಳೂ ಅಗತ್ಯವಾಗುತ್ತವೆ. ಸನ್ನಿವೇಶ ಸಂದರ್ಭಗಳ ಘನತೆಯನ್ನು ನೋಡಬೇಕಾಗುತ್ತದೆ. ವರ್ಣನೆಗಳ ವೈವಿಧ್ಯವನ್ನೂ ಪರಿಗಣಿಸಬೇಕಾಗುತ್ತದೆ. ಆಂಡಯ್ಯನೂ ಕೂಡ ತನ್ನ ಕೃತಿಯು ಮಹಾಕಾವ್ಯ ಎಂಬ ಭ್ರಮೆಯನ್ನೇನೂ ಹೊಂದಿರಲಿಲ್ಲ. ಈ ಕಾರಣಗಳಿಂದ ಈ ಕೃತಿಯು ಒಂದು ಖಂಡಕಾವ್ಯದಂತೆ ಕಂಡುಬರುತ್ತದೆ.

## 2.9 ಸ್ವಪರೀಕ್ಷಾ ಪ್ರಶ್ನೆಗಳು

(ಇಲ್ಲಿನ ಎಲ್ಲಾ ಪ್ರಶ್ನೆಗಳಿಗೂ ನೀವೇ ಉತ್ತರಗಳನ್ನು ಹುಡುಕಿಕೊಳ್ಳುವುದು)

೧. ಒಂದನೆಯ ನಾಗವರ್ಮನು ರಚಿಸಿರುವ ಕೃತಿಗಳು ಯಾವುವು?

..........................................................................................

..........................................................................................

..........................................................................................

೨. ಕರ್ನಾಟ ಕಾದಂಬರಿ ಕಾವ್ಯದ ನಾಯಕ ನಾಯಕಿಯರ ಹೆಸರನ್ನು ತಿಳಿಸಿ.

..........................................................................................

..........................................................................................

..........................................................................................

೩. ಕಾದಂಬರಿ ಕಾವ್ಯದ ಪ್ರಧಾನ ರಸ ಯಾವುದು?

..........................................................................................

..........................................................................................

..........................................................................................

೪. ರಾಮಚಂದ್ರ ಚರಿತ ಪುರಾಣದ ಕರ್ತೃ ಯಾರು?

..........................................................................................

..........................................................................................

..........................................................................................

೫. ಮಲ್ಲಿನಾಥಪುರಾಣ ಲೌಕಿಕ ಕಾವ್ಯವೇ, ಧಾರ್ಮಿಕ ಕಾವ್ಯವೇ ತಿಳಿಸಿ.

..........................................................................................

..........................................................................................

..........................................................................................

೬. ನಯಸೇನನ ಕೃತಿಯ ಹೆಸರೇನು?

..........................................................................................

..........................................................................................

..........................................................................................

೭. ನೇಮಿಚಂದ್ರನು ರಚಿಸಿರುವ ಕೃತಿಗಳ ಹೆಸರನ್ನು ತಿಳಿಸಿ.

........................................................................................................................

........................................................................................................................

೮. ನೇಮಿನಾಥ ಪುರಾಣದ ಪ್ರಮುಖ ಪಾತ್ರಗಳನ್ನು ಹೆಸರಿಸಿ.

........................................................................................................................

........................................................................................................................

........................................................................................................................

೯. ಲೀಲಾವತಿ ಕಾವ್ಯದಲ್ಲಿನ ಪ್ರಮುಖ ಪಾತ್ರಗಳನ್ನು ಹೆಸರಿಸಿ.

........................................................................................................................

........................................................................................................................

........................................................................................................................

೧೦. ರುದ್ರಭಟ್ಟ ರಚಿಸಿರುವ ಕೃತಿಗಳನ್ನು ಹೆಸರಿಸಿ.

........................................................................................................................

........................................................................................................................

........................................................................................................................

೧೧. ಜಗನ್ನಾಥ ವಿಜಯದ ಆಕರಗ್ರಂಥ ಯಾವುದು?

........................................................................................................................

........................................................................................................................

........................................................................................................................

೧೨. ಜನ್ನ ಕವಿಯ ಕಾಲ ಯಾವುದು?

........................................................................................................................

........................................................................................................................

........................................................................................................................

೧೩. ಮಾರಿದತ್ತನು ಯಾರು, ಅವನ ಪರಿವರ್ತನೆಗೆ ಕಾರಣವೇನು?

........................................................................................................................

........................................................................................................................

........................................................................................................................

೧೪. ಅಮೃತಮತಿಯು ಮಾಡಿದ ಅಪರಾಧಗಳೇನು?

................................................................................................

................................................................................................

................................................................................................

೧೫. ಸುನಂದೆಯ ಅಪಹರಣ ಹೇಗೆ ನಡೆಯಿತು?

................................................................................................

................................................................................................

................................................................................................

೧೬. ಕಬ್ಬಿಗರ ಕಾವ ಕೃತಿಯ ಮತ್ತೊಂದು ಹೆಸರು ಏನು?

................................................................................................

................................................................................................

................................................................................................

## 2.10 ಸಾರಾಂಶ

ಒಟ್ಟಿನಲ್ಲಿ ಕನ್ನಡ ಸಾಹಿತ್ಯ ಬಹಳ ವಿಸ್ತಾರವಾಗಿ ಹರಿದು ಬರುತ್ತಿರುವುದನ್ನು ಗಮನಿಸಬಹುದು. ಭಾಷೆಗೆ ಸಂಬಂಧಿಸಿದ ಹಾಗೆ, ಛಂದಸ್ಸಿಗೆ ಸಂಬಂಧಿಸಿದ ಹಾಗೆ ನಾಗವರ್ಮನು, ಪಂಪನ ದಾರಿಯಲ್ಲೇ ನಡೆಯಲು ಹೊರಟ ನಾಗಚಂದ್ರ, ನೇಮಿಚಂದ್ರ, ಜನ್ನ ಮುಂತಾದ ಕವಿಗಳು ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಕಾವ್ಯವನ್ನು ರಚಿಸಿದ್ದಾರೆ. ಹಾಗಾಗಿ ಕನ್ನಡದಲ್ಲಿ ಬಂದ ಕಾವ್ಯಗಳ ಅಧ್ಯಯನ ಬಹಳ ಉಲ್ಲಾಸ ಭರಿತವಾದುದಾಗುತ್ತದೆ.

## ಸಂಚಿಕೆ - 1
## ಕನ್ನಡ ಸಾಹಿತ್ಯ ಚರಿತ್ರೆ - ವಚನ ಸಾಹಿತ್ಯ

---

## ಘಟಕ - 3
## ವಚನ ಸಾಹಿತ್ಯ : ಹಿನ್ನೆಲೆ, ಉಗಮ, ಬೆಳವಣಿಗೆ, ಲಕ್ಷಣ

---

ಪರಿವಿಡಿ :

## 3.0 ಘಟಕದ ಉದ್ದೇಶ

- ಕನ್ನಡ ಸಾಹಿತ್ಯ ಚರಿತ್ರೆಯ ವಿವಿಧ ಘಟ್ಟಗಳಲ್ಲಿ ಒಂದಾದ ವಚನ ಯುಗವು ಹೇಗೆ ಮಹತ್ವ ಪೂರ್ಣವಾದುದು ಎಂದು ತಿಳಿಯಬಹುದು.
- ವಚನ ಸಾಹಿತ್ಯ ಎಂದರೇನು? ಈ ಪ್ರಕಾರದ ನಿರ್ಮಾಣಕ್ಕೆ ಒದಗಿ ಬಂದ ಹಿನ್ನೆಲೆಗಳು ಯಾವುವು? ಎಂಬುದು ನಿಮಗೆ ಗೊತ್ತಾಗುವುದು.
- ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯದ ಉಗಮ ಹಾಗೂ ಇತಿಹಾಸದ ಸ್ಥೂಲ ಪರಿಚಯವಾಗುವುದು.
- ವಚನ ಸಾಹಿತ್ಯ ಪ್ರಕಾರದ ರಚನಾ ಸ್ವರೂಪವನ್ನು ಅರಿಯಬಹುದು.
- ಕನ್ನಡ ಸಾಹಿತ್ಯಕ್ಕೆ ವಚನ ಪ್ರಕಾರ ನೀಡಿದ ಕೊಡುಗೆ ಏನೆಂಬುದು ಮನವರಿಕೆಯಾಗುವುದು.
- ವಚನ ಸಾಹಿತ್ಯದ ವಿಶಿಷ್ಟತೆ ನಿಮಗೆ ಗೊತ್ತಾಗುವುದು.

## 3.1 ಪೀಠಿಕೆ

ಇದು ಎಂ.ಪಿ.ಪಿ. ವಿದ್ಯಾರ್ಥಿಗಳ ಸಿದ್ಧ ಸಾಮಾಗ್ರಿ. ಅವರಿಗೆ ಮೂಲಭೂತವಾದ ಸಾಹಿತ್ಯಕ ವಿಚಾರಗಳು ತಿಳಿದಿರಲೆಂದು ಈ ಕ್ರಮ ಅನುಸರಿಸಲಾಗಿದೆ.

ವಚನಯುಗದ ವಿಸ್ತಾರವನ್ನು ಹನ್ನೆರಡನೆಯ ಶತಮಾನದ ಮಧ್ಯಭಾಗದಿಂದ ಹದಿನೈದನೆಯ ಶತಮಾನದವರೆಗೆ ಗುರುತಿಸಲಾಗಿದೆ. ಅನೇಕ ಕಾರಣಗಳಿಂದ ಈ ಯುಗ ವಿಶಿಷ್ಟವಾದುದಾಗಿದೆ. ವೀರಶೈವಧರ್ಮದಡಿಯಲ್ಲಿ ನಡೆದ ವಿವಿಧ ಕ್ರಾಂತಿಗಳಿಗೆ ಈ ಯುಗ ನಾಂದಿಹಾಡಿದೆ. ರಾಜಕೀಯ, ಧಾರ್ಮಿಕ, ಸಾಮಾಜಿಕ ರಂಗಗಳಲ್ಲಿ ಈ ಯುಗದಲ್ಲಿ ತಲೆದೋರಿದ ಸ್ಥಿತ್ಯಂತರಗಳು, ಬದಲಾವಣೆಗಳು ಹಾಗೂ ಅದಕ್ಕೆ ಎದುರಾದ ಪ್ರತಿಕ್ರಿಯೆಗಳು ಕನ್ನಡ ಸಾಹಿತ್ಯದ ಮೇಲೂ ಆಳವಾದ ಪ್ರಭಾವ ಬೀರಿದವು. ಈ ಯುಗದಲ್ಲಿ ಕವಿಗಳೂ ಅನುಭಾವಿಗಳೂ ಸಾಹಿತ್ಯ ರಚನೆಯಲ್ಲಿ ತೊಡಗಿ ಹೊಸಕೃಷಿಗೆ ಕಾರಣಕರ್ತರಾದರು.

ಸಾಹಿತ್ಯ ಚರಿತ್ರೆಯಲ್ಲಿ ಈ ಯುಗವನ್ನು ವಿವಿಧ ತಾತ್ವಿಕ ನೆಲೆಗಳಲ್ಲಿ ಗುರುತಿಸುವುದುಂಟು ೧೨-೧೫ ಶತಮಾನದ ಕಾಲಾವಧಿಯ ಈ ಯುಗವನ್ನು ಮತ ಪ್ರಾಬಲ್ಯದ ಹಿನ್ನೆಲೆಯಿಂದ 'ವೀರಶೈವಯುಗ'ಎಂದು ಹೆಸರಿಸಲಾಗಿದೆ. ಭಾಷಿಕ ಹಿನ್ನೆಲೆಯಿಂದ 'ನಡುಗನ್ನಡಯುಗ' ಎಂದು ಗುರುತಿಸಲಾಗಿದೆ. ವಿವಿಧ ಕಟ್ಟುಪಾಡುಗಳನ್ನು ಕಿತ್ತೊಗೆದ ಸ್ವತಂತ್ರ ಮನೋವೃತ್ತಿಯಿಂದಾಗಿ 'ಸ್ವಾತಂತ್ರ್ಯಯುಗ' ಎಂದೂ ಮನ್ನಿಸಲಾಗಿದೆ. ಸಾಹಿತ್ಯ ಈ ಯುಗದಲ್ಲಿ ಪ್ರೌಢವಾದ ಮಾರ್ಗದಿಂದ ದೇಸಿಗೆ ಹೊರಳಿದ ಕಾಲವಾದುದರಿಂದ 'ಸಂಕ್ರಮಣಯುಗ' ಎಂದು ಕರೆಯಲಾಗಿದೆ. ಯುಗದ ಕ್ರಾಂತಿಗೆ ನೇತಾರನೂ ವೀರಶೈವಧರ್ಮ ಪ್ರಚಾರಚಾರ್ಯನೂ ವಚನ ಸಾಹಿತ್ಯ ತಲೆಮಣಿಯೂ ಆದ ಬಸವಣ್ಣನ ಹಿರಿಮೆಯ ಕಾರಣದಿಂದ 'ಬಸವಯುಗ' ಎಂದು ಕರೆಯಲಾಗಿದೆ. ಮುಖ್ಯವಾಗಿ ರಾಜಾಶ್ರಯದಿಂದ ಜನಾಶ್ರಯಕ್ಕೆ ಜಿಗಿದು, ಪ್ರೌಢಿಮೆಯಿಂದ ಸರಳತೆಗೆ ನಡೆದ ಅಪೂರ್ವ ಸಾಹಿತ್ಯ ಪ್ರಕಾರವಾದ ವಚನ ಸಾಹಿತ್ಯದ ವಿಶಿಷ್ಟ ಗುಣಗಳಿಂದ ಇದನ್ನು 'ವಚನಯುಗ' ಎಂದು ಕರೆಯಲಾಗಿದೆ. ವಚನಕಾರರು ಭಕ್ತರೂ ಆಗಿ ನಡೆಸಿದ ಆಂದೋಲನಗಳಿಂದಾಗಿ ಇದು 'ಭಕ್ತಿಯುಗ'ವೂ ಹೌದು 'ಕ್ರಾಂತಿಯುಗ'ವೂ ಹೌದು. ಈ ವಿಶಿಷ್ಟ ಪ್ರಕಾರವನ್ನು ನೀವಿಲ್ಲಿ ಪರಿಚಯ ಮಾಡಿಕೊಳ್ಳುವಿರಿ.

## 3.2 ವಚನ ಸಾಹಿತ್ಯ :ಹಿನ್ನೆಲೆ

ಕನ್ನಡ ಸಾಹಿತ್ಯೇತಿಹಾಸದಲ್ಲಿ, ವಚನ ಸಾಹಿತ್ಯಕ್ಕೆ ಪ್ರೇರಕವಾಗಿ ನಿರ್ಮಾಣವಾಗಿದ್ದ ಪೂರ್ವಭಾವಿಸ್ಥಿತಿಗಳನ್ನು ನಾವಿಲ್ಲಿ ಪರಿಚಯಿಸಿಕೊಳ್ಳಬೇಕಾಗಿದೆ. ವಚನ ಸಾಹಿತ್ಯ ತಲೆದೋರುವುದಕ್ಕೆ ಒಂದು ಅನಿವಾರ್ಯ ಸ್ಥಿತಿ ಅಂದು ಏರ್ಪಟ್ಟಿತ್ತು. ಅಂಥ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಸಾಹಿತ್ಯಕ ಪರಿಸ್ಥಿತಿಗಳ ಹಿನ್ನೆಲೆಯನ್ನು ಪರಿಚಯಿಸಿಕೊಳ್ಳದೆ ವಚನ ಯುಗದ ಮಹತ್ವವನ್ನು ಅರಿಯುವುದು ಸೂಕ್ತವಾಗುವುದಿಲ್ಲ.

### 3.2.1 ರಾಜಕೀಯ

ವಚನ ಸಾಹಿತ್ಯದ ಉದಯಪೂರ್ವದ ರಾಜಕೀಯ ಸ್ಥಿತಿಗತಿಗಳನ್ನು ಗಮನಿಸಿದರೆ ಅದು ಅಷ್ಟೇನು ಸುವ್ಯವಸ್ಥಿತವಾಗಿದ್ದಂತೆ ಕಂಡುಬರುವುದಿಲ್ಲ. ೧೧-೧೨ನೆಯ ಶತಮಾನಗಳಲ್ಲಿ ಕರ್ನಾಟಕದ ರಾಜಮನೆತನಗಳು ತಮ್ಮ ತಮ್ಮ ರಾಜ್ಯ ಹಾಗೂ ಸಿಂಹಾಸನಗಳಿಗಾಗಿ ತಮ್ಮ ತಮ್ಮಲ್ಲೇ ಹೊಡೆದಾಡುತ್ತಿದ್ದು ಬೇರೆ ವಿಷಯಗಳಲ್ಲಿ ಆಸಕ್ತಿ ಕಳೆದುಕೊಂಡಿದ್ದವು. ವಚನ ಯುಗದಲ್ಲೂ ಇದು ಮುಂದುವರಿದಿದೆ. '೧೨ನೆಯ ಶತಕದ ಮಧ್ಯದಿಂದ ೧೫ನೆ ಶತಕದ ವರೆಗಿನ ಈ ಯುಗದಲ್ಲಿ ರಾಜ್ಯ ಸಾಮ್ರಾಜ್ಯಗಳ ಉದಯಾಸ್ತಗಳೂ ಯುದ್ಧ ಕೋಲಾಹಲಗಳೂ ಮಾತ್ರವಲ್ಲದೆ ಜನಜೀವನವನ್ನೇ ಅಲ್ಲಾಡಿಸಿ ಹೊಸ ಪಲ್ಲಟಗಳನ್ನು ಬರಮಾಡಿದ ರಾಜಕೀಯ ಧಾರ್ಮಿಕ ಸ್ಥಿತ್ಯಂತರಗಳು ತಲೆದೋರಿದವು. ಅಂದಂದಿನ ಕಲೆ ವಾಙ್ಮಯಗಳ ಮೇಲೆ ತೀವ್ರಪ್ರಭಾವವನ್ನು ಬೀರಿದವು' ಎಂದು ರಂ.ಶ್ರೀ ಮುಗಳಿಯವರು ಇದನ್ನು ಸೂಕ್ತವಾಗಿಯೇ ಗುರುತಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ ಪ್ರಬಲರಾಗಿದ್ದ ಚಾಲುಕ್ಯರು ಹನ್ನೆರಡನೆ ಶತಮಾನದ ಮಧ್ಯದ ವೇಳೆಗೆ ಕಲಚುರ್ಯರಿಗೆ ಸೋತು ಮೂಲೆಗುಂಪಾದರು. ಕಲ್ಯಾಣ ಚಾಲುಕ್ಯವಂಶದ ವೈಭವವು ೬ನೆಯ ವಿಕ್ರಮಾದಿತ್ಯ ಮತ್ತು ೩ನೆಯ ಸೋಮೇಶ್ವರರ ಕಾಲದಲ್ಲಿ ಕೊನೆಗೊಂಡು ಹನ್ನೆರಡನೆ ಶತಕದ ಮಧ್ಯಕಾಲಕ್ಕೆ ಇಳಿಮೊಗವಾಗಿತ್ತು. ಕೈಲಾಗದ ೩ನೆ ತೈಲಪನನ್ನು ಮೂಲೆಗೊತ್ತಿ ಕಲಚುರಿ ವಂಶದ ಬಿಜ್ಜಳ ರಾಜ್ಯ ಸೂತ್ರವನ್ನು ಕೈಗೆತ್ತಿಕೊಂಡನು. ಮಹಾಮಾಂಡಲಿಕನಾಗಿದ್ದಾತ ಕ್ರಮೇಣ ಚಕ್ರವರ್ತಿಯಾದನು. ಚಾಲುಕ್ಯ ಸಾಮ್ರಾಜ್ಯದ ಪ್ರತಿಷ್ಠೆಗಳು ಬಿಜ್ಜಳನ ಪಾಲಾದವು. ವಿಜಯಿಗಳಾದ ಕಲಚುರ್ಯರೂ ಆ ಶತಮಾನದ ಕೊನೆಯ ವೇಳೆಗ ಯಾದವರ ಪ್ರಾಬಲ್ಯಕ್ಕೆ ದಾರಿಮಾಡಿಕೊಟ್ಟು, ತಾವು ಮರೆಯಾಗಬೇಕಾಯಿತು. ದಕ್ಷಿಣ ಕರ್ನಾಟಕದಲ್ಲಿ ಹೊಯ್ಸಳರು ಪ್ರಬಲರಾಗಿ ರಾಜ್ಯ ವಿಸ್ತರಣೆಗೆ ತೊಡಗಿದ್ದರು. ಉತ್ತರದಲ್ಲಿ ಯಾದವರು ದಕ್ಷಿಣದಲ್ಲಿ ಹೊಯ್ಸಳರು ಪ್ರಬಲಿಸುತ್ತಾ ಬಂದರು. ಅಷ್ಟೇಅಲ್ಲ ರಾಜ್ಯ ವಿಸ್ತರಣೆಗಾಗಿ ಪರಸ್ಪರ ಹೋರಾಟದಲ್ಲಿ ತೊಡಗಿದ್ದರು. ಇಂತಹ ಅನಿಶ್ಚಿತ ರಾಜಕೀಯ ಸ್ಥಿತಿ ಕರ್ನಾಟಕದ ರಾಜಕೀಯ ದೌರ್ಬಲ್ಯಕ್ಕೆ ಎಡೆಮಾಡಿಕೊಟ್ಟಿತ್ತು. ೧೩ ನೆಯ ಶ. ದಲ್ಲಿ ಕರ್ನಾಟಕದ ಒಗ್ಗಟ್ಟು ಶಿಥಿಲಗೊಂಡ ಸಮಯದ ಸಂಧಿಸಾಧಿಸಿ ಮಹಮ್ಮದೀಯರ ಧಾಳಿ ಆರಂಭವಾಯಿತು. ಅಲ್ಲಾವುದ್ದೀನ್, ಮಲ್ಲಿಕಾಫರ್ ಇವರು ಧಾಳಿ ಮಾಡಿದ ಮೇಲೆ ಹೊಯ್ಸಳರನ್ನು ಬಗ್ಗು ಬಡಿದು ಮಾಂಡಲಿಕರನ್ನಾಗಿಸಿಕೊಂಡರು. ಮುಂದೆ ೧೪ನೆಯ ಶ.ದಲ್ಲಿ ಸಂಗಮ ವಂಶದ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯಾಗುವವರೆಗೆ ಈ ಧಾಳಿಯನ್ನು ತಡೆವ ಚೈತನ್ಯ ಜನತೆಯಲ್ಲಿ ಉಳಿದಂತೆ ಕಂಡುಬರುವುದಿಲ್ಲ.

ಮೇಲಿಂದ ಮೇಲೆ ನಡೆವ ಯುದ್ಧಗಳು, ರಾಜರ ರಾಜ್ಯದಾಹ ದಕ್ಷಿಣ ಭಾರತದ ಪ್ರಜೆಗಳನ್ನು ವಿಹ್ವಲರನ್ನಾಗಿ ಮಾಡಿತ್ತು. ಮಹಮ್ಮದೀಯ ಧಾಳಿ ಹಿಂದು ಧರ್ಮದ ಅಸ್ತಿತ್ವವನ್ನೇ ಅಲುಗಾಡಿಸಿತ್ತು. ಸೂಕ್ಷ್ಮವಾಗಿ ಅವಲೋಕಿಸಿದಾಗ ರಾಜಕೀಯ ಪರಿಸ್ಥಿತಿಯ ಏಳುಬೀಳುಗಳಿಂದಾಗಿ ಒಂದು ಬಗೆಯ ಅಸ್ಥಿರತೆ, ಅವ್ಯವಸ್ಥೆ ಮನೆಮಾಡಿರುವುದು ಕಾಣುತ್ತದೆ. ತ್ವರಿತವಾಗಿ ಬದಲಾಗುತ್ತಿದ್ದ ರಾಜಕೀಯ ಸ್ಥಿತಿಯಿಂದಾಗಿ ಸಾಹಿತ್ಯ ಪೋಷಣೆ ಭದ್ರವಾಗಿತ್ತೆಂದು ಹೇಳುವುದು ಸಮಂಜಸವಾಗುವುದಿಲ್ಲ. ರಾಜ್ಯ ರಕ್ಷಣೆ ಮುಂದಾಗಿ ಸಾಹಿತ್ಯ ಪೋಷಣೆ ಹಿಂದಾಗಿತ್ತು. ಸಾಹಿತ್ಯ ಸೃಜನೆಗೆ ಆರೋಗ್ಯಕರವಾದ ಪರಿಸರವಿಲ್ಲದ

ಕಾರಣ ರಾಜ ಪೋಷಿತ ಸಾಹಿತ್ಯ ಸೃಷ್ಟಿ ಗೊಳ್ಳುವ ಸ್ಥಿತಿ ಅನಿವಾರ್ಯವಾಗಿ ಏರ್ಪಟ್ಟಿತ್ತು. ರಾಜಕೀಯ ಅಸ್ತವ್ಯಸ್ತತೆಯೇ ನೂತನ ಸಾಹಿತ್ಯದ ಉದಯಕ್ಕೆ ಅನಿವಾರ್ಯ ಮಾರ್ಗವನ್ನು ಕಲ್ಪಿಸಿತ್ತು.

### 3.2.2 ಧಾರ್ಮಿಕ

ಭಾರತದ ಇತಿಹಾಸದಲ್ಲಿ ಕ್ರಿ.ಶ. ೧೧೫೦-೧೩೫೦ರ ದಶಕಗಳಲ್ಲಿ ಬಹುತೇಕ ಒಂದೇ ಬಗೆಯ ಸಾಂಸ್ಕೃತಿಕ ಸ್ಪಂದನ ಕಂಡು ಬರುತ್ತದೆ. ಈ ಸಮಯದಲ್ಲಿ ಧಾರ್ಮಿಕ ರಂಗದಲ್ಲಿ ಹೊಸ ಸಿದ್ಧಾಂತಗಳೂ ಮಾರ್ಗಗಳೂ ಹುಟ್ಟಿ ಕೊಂಡವು. ಅದಕ್ಕೆ ಪೂರಕವಾಗಿ ಸಮಾಜದಲ್ಲಿ ಹೊಸ ವ್ಯವಸ್ಥೆ ಮತ್ತು ಮೌಲ್ಯಗಳನ್ನು ಅಳವಡಿಸುವ ಕಡೆ ದೃಷ್ಟಿ ಹರಿದಂತೆ ತೋರುತ್ತದೆ. ಈ ಧಾರ್ಮಿಕ ಪುನರುತ್ಥಾನಕ್ಕೆ ಭಾರತದಲ್ಲಿ ನಾನಾ ಕಾರಣಗಳಿಂದ ಕುಸಿತಗೊಂಡಿದ್ದ ಬೌದ್ಧ, ಜೈನ, ವೈದಿಕ ಧರ್ಮಗಳೇ ಕಾರಣವಲ್ಲ. ಮುಸ್ಲಿಂ ಆಕ್ರಮಣದ ಮಹಾಪೂರವೂ ಇದಕ್ಕೆ ಕಾರಣವಾಗಿದೆ. ಭಾರತವನ್ನೆಲ್ಲ ವ್ಯಾಪಿಸಿದ ಭಕ್ತಿ ಚಳವಳಿಗೆ ಇದು ತೀವ್ರತೆಯನ್ನು ಒದಗಿಸಿತು.

ಭಾರತದ ಈ ಚಳವಳಿಗೆ ಪ್ರೇರಣೆ ನೀಡುವಂತಹ ಸ್ಥಿತಿಯೂರೋಪಿನಲ್ಲೂ ಇತ್ತು. ಆ ಕಾಲದ ಯೂರೋಪಿನಲ್ಲಿ ಚರ್ಚು ಅಂಧಶ್ರದ್ಧೆಯ ತವರಾಗಿದ್ದು, ದೈವಶ್ರದ್ಧೆ ಗೌಣವಾಗಿದ್ದು, ಸಂಪತ್ತು ಪ್ರಧಾನವಾಗಿತ್ತು. ಸಂತ ಫ್ರಾನ್ಸಿಸ್ (೧೧೮೨-೧೨೨೬) ಜನರ ಮನಸ್ಸನ್ನು ಮತ್ತೆ ಪರಿವರ್ತಿಸಲು ಪ್ರಯತ್ನಿಸುತ್ತಿದ್ದ. ಇಟಲಿಯ ಈ ಸಂತನೂ ಆತನ ಅನುಯಾಯಿಗಳೂ ಊರಿಂದೂರಿಗೆ ಅಲೆದಾಡಿ ಸಾಮಾನ್ಯ ಜನತೆಯ ಭಾಷೆಯಲ್ಲಿ ಬೋಧನೆ ಮಾಡುತ್ತಾ ಧಾರ್ಮಿಕ ರಂಗದಲ್ಲಿ ಬಹಳ ಪ್ರಭಾವ ಬೀರಿದ್ದರು. ಇಂತಹ ಸಂತರಿಂದಾಗಿ ಕ್ರೈಸ್ತ ಧರ್ಮ ಮತ್ತೆ ತನ್ನ ಸರಳ ಮಾರ್ಗಕ್ಕೆ ಮರಳಲು ಹವಣಿಸುತ್ತಿತ್ತು.

ಭಾರತದಲ್ಲೂ ಇದಕ್ಕೆ ಸರಿಸಮಾನವಾದ ಚಳವಳಿಗೆಗಳು ಸುಮಾರು ಇದೇ ಕಾಲದಲ್ಲಿ ವ್ಯಾಪಿಸಿದವು. ೭ನೆ ಶ. ಕ್ಕೆ ಬಹಳ ಮುಂಚೆಯೆ ತಮಿಳುನಾಡಿನಲ್ಲಿ ಜನಿಸಿದ ನಾಯನ್ಮಾರರು ಆಳ್ವಾರರು ಈ ಕ್ರಾಂತಿಯ ಬೀಜ ಬಿತ್ತಿದರು. ಸ್ವೀಕೃತವಾಗಿದ್ದ ಪ್ರಾಚೀನ ಸಂಪ್ರದಾಯಗಳ ಮೇಲೆ ಈ ಸಮಯದಲ್ಲಿ ಮೊದಲ ಧಾಳಿ ನಡೆಯಿತು. ೧೧ನೆ ಶ. ದ ರಾಮಾನುಜಾಚಾರ್ಯರು ವಿಷ್ಣುಭಕ್ತಿಯನ್ನೂ ಶಿವಶರಣರು ಶಿವಪಾರಮ್ಯವನ್ನೂ ಸಾರಿದರು.

ಧಾರ್ಮಿಕ ರಂಗದಲ್ಲಿ ಮೂರು ಮುಖ್ಯ ಧಾಟಿಗಳು ಈ ಕಾದಲ್ಲಿ ಪ್ರಚಲಿತವಾಗಿದ್ದವು. ಅವು ಹಿಂದು, ಬೌದ್ಧ ಹಾಗೂ ಜೈನ ಪಂಥಗಳು. ಮತ್ತೊಂದೆಡೆ ಇವುಗಳ ಜೊತೆಗೆ ಹೆಚ್ಚು ಕಡಿಮೆ ಇವುಗಳಿಗೆ ಪ್ರತಿಕ್ರಿಯಾತ್ಮಕವಾಗಿ ಬಂಡಾಯದೋಪಾದಿಯಲ್ಲಿ ಪ್ರಚಲಿತವಾದದು ಭಕ್ತಿಮಾರ್ಗ.

ಮೂಲತಃ ವೈದಿಕ ಧರ್ಮಕ್ಕೆ ವಿರುದ್ಧವಾಗಿ ತಲೆದೋರಿದ ಬೌದ್ಧಧರ್ಮ ಈ ಕಾಲದಲ್ಲಿ ಎಲ್ಲೋ ಕೆಲವು ಕಡೆ ಅಪವಾದವೆಂಬಂತೆ ಕಂಡು ಬರುತ್ತದೆ. ಹಿಂದೂ ಧರ್ಮ ಬುದ್ಧನನ್ನು ವಿಷ್ಣುವಿನ ಅವತಾರವಾಗಿ ಪರಿಗಣಿಸಿದ ಕಾರಣ ಬೌದ್ಧಧರ್ಮ ಇತರ ಧರ್ಮಗಳೊಡನೆ ಬೆರೆತು ಹೋಗುವ ಸ್ಥಿತಿ ತಲುಪಿತ್ತು. ಹಾಗೆಯೆ ಸ್ವಧರ್ಮ ಪ್ರತಿಪಾದನೆಯಲ್ಲಿ ನಿರತರಾಗಿದ್ದ ಜೈನ ಹಾಗೂ ಶೈವ ಆಚಾರ್ಯರಿಂದಲೂ ಇದಕ್ಕೆ ಹೊಡೆತ ಬಿದ್ದಿರಬಹುದು. ಒಟ್ಟಿನಲ್ಲಿ ಬೌದ್ಧಧರ್ಮ ಈ ನಾಡಿನಲ್ಲಿ ಅವಸಾನ ಸ್ಥಿತಿಯಲ್ಲಿತ್ತು.

ಅದೇ ರೀತಿ ಜೈನ ಧರ್ಮವೂ ಈ ಕಾಲದಲ್ಲಿ ಇಳಿಮುಖವಾಗುತ್ತ ಬಂದಿತ್ತು. ೯-೧೦ ನೆ ಶ.ದಲ್ಲಿ ಕರ್ನಾಟಕದ ಎಲ್ಲೆಡೆ ವಿಶೇಷವಾಗಿ ಮೆರೆದಿದ್ದ ಈ ಧರ್ಮ ೧೧ ನೆ. ಶ.ದ ಉತ್ತರಾರ್ಧದ ಹೊತ್ತಿಗೆ ತನ್ನ ಪ್ರಭಾವವನ್ನು ಕಳೆದುಕೊಳ್ಳಲಾರಂಭಿಸಿತ್ತು. ಹಿಂದಿನ ಕಾಲ ಘಟ್ಟದಲ್ಲಿ ರಾಷ್ಟ್ರಕೂಟ, ಚಾಲುಕ್ಯರ ಕಾಲದಲ್ಲಿ ರಾಜ ಮಾನ್ಯತೆ ಹೊಂದಿದ್ದ ಈ ಧರ್ಮ ಚಾಲುಕ್ಯರ ಉತ್ತರಾರ್ಧದಲ್ಲಿ ತನ್ನ ಮಾನ್ಯತೆ ಕಳೆದುಕೊಳ್ಳುತ್ತಾ ಬಂದಿತ್ತು. ಬದಲಾದ ರಾಜಕೀಯ ಸ್ಥಿತಿಗಳಿಂದಲ್ಲದೆ ಕಠಿಣ ವ್ರತಾಚರಣೆ,

ಶ್ರೀಮಂತರ ಆಶ್ರಯಗಳಿಂದಾಗಿ ಈ ಧರ್ಮ ಕ್ರಮೇಣ ಸಾಮಾನ್ಯ ಜನತೆಯಿಂದ ದೂರವಾಗುತ್ತಾ ಬಂದು ಅನ್ಯ ಧರ್ಮ ಪ್ರಸಾರಕ್ಕೆ ಅಗತ್ಯವಾದ ಭೂಮಿಕೆ ಸಿದ್ಧವಾಗಿತ್ತು.

ಈ ವೇಳೆಗಾಗಲೇ ವೈದಿಕ ಹಿಂದೂಧರ್ಮ ತನ್ನ ಉದಾತ್ತ ಅಂಶಗಳಿಂದ ದೂರಾಗಿ ಅರ್ಥಕಳೆದುಕೊಂಡಿತ್ತು. ಅದರ ಢಾಂಬಿಕತನ, ಮಡಿವಂತಿಕೆ, ಅರ್ಥಹೀನ ಆಚಾರ, ಜಾತೀಯತೆಗಳಿಂದಾಗಿ ಜನಪ್ರಿಯತೆಯನ್ನು ಕಳೆದುಕೊಂಡಿತ್ತು. ಆರ್ಥಿಕವಾಗಿ ಹಿಂದುಳಿದಿದ್ದ ಬಹುಸಂಖ್ಯಾತರಾದ ಸಾಮಾನ್ಯ ಜನರು ಈ ಶಿಷ್ಟ ಧರ್ಮದ ನೆರಳಿನಲ್ಲಿ ಆತ್ಮೋನ್ನತಿಯನ್ನು ಸಾಧಿಸುವುದು ಅಸಾಧ್ಯದ ಮಾತಾಗಿತ್ತು. ಧರ್ಮಾವಲಂಬನೆ ಕೆಲವೇ ಜಾತಿಗಳ ಸ್ವತ್ತಾಗಿ ಜನಸಾಮಾನ್ಯ ವರ್ಗ ನಿರ್ಲಕ್ಷ್ಯವಾಗಿತ್ತು. ಸ್ತ್ರೀಯರೂ, ಶೂದ್ರರೂ ಆತ್ಮೋನ್ನತಿಯ ಮಾರ್ಗದಲ್ಲಿ ಮುನ್ನಡೆಯುವುದು ಅಪರಾಧವೆನಿಸಿತ್ತು. ಗುಣ ಕರ್ಮಗಳಿಂದಾಗಿ ರೂಪುಗೊಳ್ಳಬೇಕಾಗಿದ್ದ ವರ್ಣಾಶ್ರಮ ಧರ್ಮದ ಶ್ರೇಣಿ ಹುಟ್ಟಿನಿಂದ ಜಾತಿ ಎಂಬುದಾಗಿ ಸಂಕುಚಿತವಾಗಿತ್ತು. ಹುಟ್ಟಿನಿಂದ ಜಾತಿ, ಜಾತಿಯಿಂದ ಸಾಮಾಜಿಕ ಸ್ಥಾನಮಾನ, ಮೇಲು-ಕೀಳು ಇಂತಹ ಅಸಾಂಗತ್ಯದಿಂದಾಗಿ ಸಮಾಜ ಹೋಳು ಹೋಳಾಗಿತ್ತು. ಈ ಹಿನ್ನೆಲೆಯಲ್ಲಿ ನೋಡಿದಾಗ ಭಾರತದಲ್ಲಿ ನಡೆದ ಧಾರ್ಮಿಕ ಚಳವಳಿಗಳು ಹಿಂದೂ ಧಾರ್ಮಿಕ ಸ್ವರೂಪಗಳ ವಿರುದ್ಧ ಮೈದಾಳಿದ ಪ್ರತಿಕ್ರಿಯೆಗಳೆಂದರೆ ಅತಿಶಯವಾಗುವುದಿಲ್ಲ.

ಹೀಗೆ ವಿವಿಧ ಧಾರ್ಮಿಕ ಪಂಥಗಳಲ್ಲಿ ಕಂಡು ಬರುವ ಪ್ರಮುಖ ಲೋಪವೆಂದರೆ ಜನ ಸಾಮಾನ್ಯರನ್ನು ನಿರ್ಲಕ್ಷಿಸಿದ್ದು. ಧಾರ್ಮಿಕ ಅಸಾಂಗತ್ಯವನ್ನು ಕಂಡು ಎಚ್ಚೆತ್ತ ಪ್ರಜ್ಞಾವಂತ ಹಾಗೇ ನಿರ್ಲಕ್ಷಿತ ಬಹು ಸಂಖ್ಯಾತ ಸಾಮಾನ್ಯ ಜನತೆ ಹೊಸ ಆಂದೋಲನಕ್ಕಾಗಿ ಸಜ್ಜುಗೊಂಡಿತ್ತು.

### 3.2.3 ಸಾಮಾಜಿಕ

ಧರ್ಮ ಸಮಾಜದ ರಕ್ಷಾಕವಚ. ಅದು ಶಿಥಿಲಗೊಂಡಾಗ ಆಗ ಬೇಕಾದ ಕೆಲಸ ಕಾರ್ಯಗಳೇ ಈ ಯುಗದಲ್ಲೂ ನಡೆದುದನ್ನು ಕಾಣಬಹುದು. ಹಿಂದೆ ಗಮನಿಸಿದಂತೆ ಅನಿಶ್ಚಿತ ರಾಜಕೀಯ ಸ್ಥಿತಿಗತಿ, ಅಸ್ಥಿರ ಧಾರ್ಮಿಕ ಪರಿಸ್ಥಿತಿ ಜನತೆಯನ್ನು ತಲ್ಲಣಗೊಳಿಸಿದ್ದವು. ಒಂದು ಕಡೆ ರಾಜ್ಯದಾಹದ ಕಿತ್ತಾಟದಲ್ಲಿ ಜನರು ಪಡುತ್ತಿದ್ದ ಕಷ್ಟಕಾರ್ಪಣ್ಯ ಮತ್ತೊಂದೆಡೆ ಧೈವಧರ್ಮಗಳ ಹೆಸರಿನಲ್ಲಿ ಸಮಾಜವನ್ನು ಶೋಷಣೆಮಾಡಿ ಸ್ವಾರ್ಥ ಸಾಧಿಸ ಹೊರಟ ಧಾರ್ಮಿಕ ನಾಯಕರ ತಂಡದಿಂದೊದಗಿದ ದಾರುಣಸ್ಥಿತಿ. ವಿಚಾರಪರರೂ ಸಜ್ಜನರೂ ಆದ ವ್ಯಕ್ತಿಗಳಿಗೆ ಈ ಸ್ಥಿತಿ ವೇದನೆಗೆ ಕಾರಣವಾಗಿ ಸಮಾನ ಅವಕಾಶ, ಸ್ವಾತಂತ್ರ್ಯಗಳ ತಳಹದಿಯ ಮೇಲೆ ನೂತನ ಆರೋಗ್ಯಕರ ಸಮಾಜವನ್ನು ಸೃಷ್ಟಿಸುವ ಮನಸ್ಸು ಮೂಡಲು ದಾರಿಯಾಯಿತು.

ಧರ್ಮ ಶಿಷ್ಟರ ಸ್ವತ್ತಾಗಿ, ಸಾಮಾನ್ಯ ಜನತೆಯ ಆತ್ಮೋನ್ನತಿ ಜಾತಿ, ಕುಲ, ವರ್ಗಗಳ ತಾರತಮ್ಯದಿಂದಾಗಿ ದುರ್ಲಭವಾಗಿತ್ತು. ಜೈನಮತ ಉತ್ಕರ್ಷಸ್ಥಿತಿಯನ್ನು ಕಳೆದುಕೊಂಡು ಇದ್ದುದನ್ನು ಕಾಯ್ದುಕೊಳ್ಳುವ ಸ್ಥಿತಿ ತಲುಪಿತ್ತು. ವೈದಿಕ ಮತಗಳು ಶುಷ್ಕ ಆಚಾರ ಸಂಪ್ರದಾಯಗಳ ಬೆನ್ನುಹತ್ತಿದ್ದವು. ಡಾಂಭಿಕತೆ, ಮೇಲುಕೀಳು, ಹೆಣ್ಣುಗಂಡು ಎಂಬ ಭೇದ ಭಾವಗಳನ್ನು ಕಿತ್ತು ಸಮಾಜಕ್ಕೆ ದಾರಿತೋರಬೇಕಾದ ನೇತಾರರ ಅವಶ್ಯಕತೆಯಿತ್ತು. ಈ ಹೊತ್ತಿಗಾಗಲೇ ಪಾಶುಪತದಂತಹ ಶೈವ ಪಂಥಗಳು ಶೈವಧರ್ಮವನ್ನು ಜನ ಸಾಮಾನ್ಯರಲ್ಲಿ ಬಿತ್ತಲು ಪ್ರಯತ್ನಿಸಿದ್ದವು. ಕೆಲವೇ ಶಿಷ್ಟ ವರ್ಗಕ್ಕೆ ಸೀಮಿತವಾಗಿದ್ದ ಜೈನ ಹಾಗೂ ವೈಷ್ಣವದೇವತೆಗಳು ಒಂದೆಡೆ, ಕೆಳವರ್ಗದ ಜನತೆ ರೂಢಿಸಿಕೊಂಡಿದ್ದ ಅಸಂಖ್ಯಾತ ಜನಪದ ದೇವತೆಗಳು ಮತ್ತೊಂದೆಡೆ ಹೀಗೆ ಮಾನವ ಸಮಾಜವನ್ನು ಛಿದ್ರಗೊಳಿಸಿದ್ದ ವಿವಿಧ ಧರ್ಮಪಂಥಗಳ ಬದಲಾಗಿ ಎಲ್ಲರನ್ನೂ ಒಂದು ಗೂಡಿಸುವ ಏಕದೇವತಾ ಆರಾಧನೆ ಉಗಮಿಸಲು ಅಗತ್ಯ ಪರಿಸ್ಥಿತಿ ಒದಗಿತ್ತು. ಶಿವನನ್ನು ಪರದೈವವೆಂದೂ ನಿಶ್ಚಲ ಭಕ್ತಿಯಿಂದ ಸರ್ವರೂ ಅವನನ್ನು ಆರಾಧಿಸಿ ಒಲಿಸಬಹುದೆಂದೂ ಉದಾತ್ತ ಧ್ಯೇಯದಿಂದ ಹೊಮ್ಮಿದ ವೀರಶೈವ ಧರ್ಮ ಜನತೆಗೆ ಸಹಜವಾಗೇ ಪ್ರಿಯವಾಗಲು ಕಾರಣವಾಯಿತು. ಹೊಸ ವಿಚಾರಗಳನ್ನು ಬಿತ್ತಿ ಬೆಳೆಸಲು, ಧಾರ್ಮಿಕ ಸಾಮಾಜಿಕ ಸುಧಾರಣೆ ಸಾಧಿಸಲು

ವೀರಶೈವ ಮಾಧ್ಯಮದೊಂದಿಗೆ ದೊಡ್ಡ ಆಂದೋಲನವೇ ನಡೆಯಿತು. ಪಾರಮಾರ್ಥಿಕದಂತೆ ಸಾಮಾಜಿಕ ಸುವ್ಯವಸ್ಥೆಗಾಗಿ ಹುಟ್ಟಿಕೊಂಡ ಕಾಯಕ ತತ್ವ ಜನ ಸಾಮಾನ್ಯರ ಆಕರ್ಷಣೆಗೆ ಕಾರಣವಾಯಿತು. ಲಿಂಗಧಾರಣೆ, ಅಷ್ಟಾವರಣ ಮತ್ತು ಷಟ್ಸ್ಥಲಗಳಿಂದ ರೂಪುಗೊಂಡ ವೀರಶೈವ ಧರ್ಮ ಧಾರ್ಮಿಕ ಸಾಮಾಜಿಕ ಅಂತರಗಳನ್ನು ಒರೆಸಿ ಹಾಕುವಲ್ಲಿ ಮಹತ್ತರ ಪಾತ್ರ ವಹಿಸಿತು. 'ಅನುಭವ ಮಂಟಪ', ದಂತಹ ವಿಚಾರ ಮಂಟಪ ಜನತೆಯಲ್ಲಿ ವೈಚಾರಿಕ ಆಂದೋಲನ ಉಂಟಾಗಲು ಸಹಕರಿಸಿತು.

ಅಂದಿನ ಸಮಾಜ ವರ್ಗ, ಜಾತಿ, ಲಿಂಗ ಭೇದಗಳಿಂದ ವಿಚ್ಛಿದ್ರಗೊಂಡಿತ್ತು. ಅದನ್ನು ಅಳಿಸಲು ವೀರಶೈವ ಧರ್ಮದಡಿಯಲ್ಲಿ ನಡೆದ ಆಂದೋಲನ ಸಕಾಲಿಕವಾಗಿತ್ತು. ನೂತನ ವಿಚಾರ ಧಾರೆಗಳಿಂದ ಉದ್ಭವಿಸಿದ ವೀರಶೈವ ಗನ ಸಮೂಹ ಒಂದೆಡೆ, ಅನೂತಾನವಾಗಿ ಬಂದ ಕುಲ ಜಾತಿಮೊದಲಾದ ಅಂತರಗಳನ್ನು ಪೋಷಿಸಿಕೊಂಡು ಬಂದ ಜನ ಸಮೂಹ ಮತ್ತೊಂದೆಡೆ , ಸಹಜವಾಗ ಇವೆರಡರ ನಡುವೆ ಘರ್ಷಣೆಗಳು ನಡೆದಿರಬಹುದು . ಬಸವ ಬಿಜ್ಜಳರ ಸಂಘರ್ಷವೂ ಇದಕ್ಕೆ ನಿದರ್ಶನವಾಗಿದೆ. ಕೀಳುಕುಲದ ಹಾಗೆ ದಮನಕ್ಕೆ ಒಳಗಾಗಿದ್ದ ಮತ್ತೊಂದು ವರ್ಗ ಸ್ತ್ರೀಯರದು. ಇಂತಹ ತುಳಿತದ ವಿರುದ್ಧ ಹುಟ್ಟಿಕೊಂಡ ಪ್ರತಿಕ್ರಿಯೆಯಾಗಿ ಅಕ್ಕನ ವೃತ್ತಾಂತವಿದೆ ಹೀಗೆ ಸಮಾಜದ ಅಂಕು ಡೊಂಕುಗಳೇ ವೀರಶೈವ ಆಂದೋಲನಕ್ಕೆ ಸೂಕ್ತ ತಳಹದಿ ನಿರ್ಮಿಸಿದ್ದು ಕಂಡು ಬರುತ್ತದೆ.

### 3.2.4 ಸಾಹಿತ್ಯಿಕ

ಸಮಾನತೆಯ ತಳಹದಿಯ ಮೇಲೆ ಸಮಾಜ ನಿರ್ಮಿತವಾಗ ಬೇಕಾದ ಪರಿಸ್ಥಿತಿ ಒದಗಿದಾಗ ಜನತೆಗೊಂದು ದನಿ ಬೇಕಾಗಿತ್ತು. ಜನಪರ ಮಾದರಿಯಂದು ಅಗತ್ಯವಾಗಿತ್ತು. ಸಾಹಿತ್ಯ ರಂಗದಲ್ಲಿ ಉದ್ಭವಿಸಿದ ವಚನ ಸಾಹಿತ್ಯ ಆ ಕೊರತೆಯನ್ನು ನೀಗಿಸಲು ಸಹಕರಿಸಿತು. ನೂತನ ಸಾಮಾಜಿಕ ಕಲ್ಪನೆ ಆಶಯಗಳೇ ಸಾಹಿತ್ಯಿಕ ಕ್ರಾಂತಿಗೂ ನೀರೆರೆದಂತೆ ತೋರುತ್ತದೆ. ಸಾಮಾನ್ಯ ಜನತೆ ಕ್ರಿಯಾಶೀಲವಾದಾಗ ಅದಕ್ಕೆ ಪೂರಕವಾದ ಸಾಹಿತ್ಯಿಕ ವೇದಿಕೆಯೊಂದು ಸಿದ್ಧವಾಗಲೇಬೇಕಾದ ಪರಿಸ್ಥಿತಿ ಒದಗಿ ಬಂದಿತ್ತು.

ವಚನ ಪೂರ್ವಯುಗದ ಸಾಹಿತ್ಯ ರಾಜಾಶ್ರಯದ ವೈಭವದ ಗತ್ತಿನಲ್ಲಿತ್ತು. ಪಂಡಿತರ ಸ್ವತ್ತಾಗುಳಿದ ಸಾಹಿತ್ಯ ಪಾಮರದಿಂದ ದೂರವಾಗಿತ್ತು. ಪ್ರತಿಭೆ ಪಾಂಡಿತ್ಯಗಳಿಂದ ಕೂಡಿದ್ದ ಸಾಹಿತ್ಯ ರಾಜರ ಮತ್ತು ರಾಜಾಸ್ಥಾನದವರ ಮೆಚ್ಚುಗೆಯನ್ನೆ ಗುರಿಯನ್ನಾಗಿಸಿಕೊಂಡಿತ್ತು. ಸಂಸ್ಕೃತದ ಅನುಕರಣೆಯಿಂದ, ಸಂಸ್ಕೃತ ಭೂಯಿಷ್ಠವಾಗಿ ಬರೆಯುತ್ತಿದ್ದ ಚಂಪೂ ಕಾವ್ಯಗಳು ಜನಸಾಮಾನ್ಯಕ್ಕೆ ನುಂಗಲಾರದ ತುತ್ತಾಗಿದ್ದವು. ವಸ್ತು, ಭಾಷೆ, ಛಂದಸ್ಸುಗಳಲ್ಲಿ ಪ್ರೌಢಿಮೆಯ ಮಾರ್ಗದ ಗತ್ತಿನಲ್ಲಿದ್ದ ಸಾಹಿತ್ಯದ ಆಸ್ವಾದನೆಯಿಂದ ಸಾಮಾನ್ಯ ಜನರು ವಂಚಿತರಾಗಿದ್ದರು. ರಾಜ ಗದ್ದುಗೆಯೇರಿ ಬಿಂಕ ಬಿಗುಮಾನಗಳಿಂದ ಕುಳಿತಿದ್ದ ಕಾವ್ಯದೇವಿ ದರ್ಶನ ಸಾಮಾನ್ಯ ಜನತೆಗೆ ದುರ್ಲಭವಾಗಿತ್ತು. ಸಾಮಾನ್ಯ ಜನತೆಗೆ ಸಾಹಿತ್ಯದ ಆಸ್ವಾದನೆ ಕಷ್ಟಸಾಧ್ಯವಾಗಿದ್ದಂತೆ ಸಾಹಿತ್ಯ ರಚನಾ ಮಾರ್ಗವೂ ದುಸ್ತರವಾಗಿತ್ತು. ಪ್ರೌಢವಾದ ಸಂಸ್ಕೃತ ವೃತ್ತಗಳಿಂದ ರಚಿಸಲ್ಪಟ್ಟ ಚಂಪೂರೂಪದ ಕಾವ್ಯಗಳನ್ನು ಓದುವುದೇ ಅಸಾಧ್ಯದ ಮಾತಾಗಿದ್ದಾಗ, ಆ ರೀತಿಯಲ್ಲಿ ರಚಿಸುವುದಂತೂ ಕನಸಿನ ಮಾತೇ ಆಗಿತ್ತು. ಧರ್ಮನಿರೂಪಣೆಗಾಗಿ ಪ್ರಾಂತಭಾಷೆಯಲ್ಲಿ ಕೃತಿರಚನೆ ಮಾಡಿದ ಜೈನರು ರಾಜರ ಕೃಪಾಯಾಚನೆಗಾಗಿ, ಪಂಡಿತರ ಮೆಚ್ಚುಗೆಗಾಗಿ ಪ್ರೌಢಿಮೆಯ ಹಾದಿಯಲ್ಲೆ ಸಾಗಬೇಕಾಯಿತು. ಕೊನೆಗೊಮ್ಮೆ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ಸರಳಮಾರ್ಗದಲ್ಲಿ ಸಾಗಬೇಕಾದ ಸ್ಥಿತಿಯೂ ಜೈನ ಕವಿಗಳ ಕಾವ್ಯಗಳಿಗೊದಗಿತ್ತು.

ಇಂತಹ ಸಂದರ್ಭದಲ್ಲಿ ಸಾಮಾಜಿಕ ಕ್ರಾಂತಿಗೆ ನಾಂದಿಹಾಡಿತಂತೆ ವಚನಗಳು ಸಾಹಿತ್ಯಿಕ ಕ್ರಾಂತಿಗೂ ನಾಂದಿ ಹಾಡಿದವು. ಅದುವರೆಗೆ ಅನುಕರಣ ಶೀಲವಾಗಿ, ಕೃತಕವಾಗಿ ರಾಜವಂಶದ ವೈಭವೀಕರಣಕ್ಕೆ, ಪುರಾಣಗಳ ಘನತೆಗೆ ಮೀಸಲಾಗಿದ್ದ ಕಾವ್ಯ ಪ್ರಪಂಚವನ್ನು ಸಾಮಾನ್ಯಜನತೆಗೆ ತೆರೆದಿಟ್ಟ ಕೀರ್ತಿ ವಚನಕಾರರಿಗೆ ಸಲ್ಲಬೇಕು. ಸೀಮಿತ, ಪರಿಮಿತ ಚಂಪೂ ರೂಪದಿಂದ ಹೊರಬಂದ ಕಾವ್ಯ ವಚನದ ವಿವಿಧ ಭಾವ ಭಂಗಿಗಳಲ್ಲಿ ಹೊರಹೊಮ್ಮಿತು.

ವಸ್ತು, ಭಾಷೆ, ಶೈಲಿಗಳಲ್ಲಿ ಪ್ರೌಢಿಮೆಯಿಂದ ಕೂಡಿದ್ದ ಚಂಪೂಮಾರ್ಗ ಸಾಮಾನ್ಯ ಜನತೆಯಿಂದ ದೂರವಾಗುತ್ತಾ ನಡೆದುದೇ ಹೊಸ ಸಾಹಿತ್ಯ ನಿರ್ಮಾಣಕ್ಕೆ ಸೂಕ್ತ ವೇದಿಕೆ ನಿರ್ಮಿಸಿಕೊಟ್ಟಂತೆ ತೋರುತ್ತದೆ.

ಒಂದು ಕಡೆ ಸಮಾನತೆಯ ಚೌಕಟ್ಟಿನಲ್ಲಿ ರೂಪಗೊಳ್ಳ ಹೊರಟ ಸಮಾಜ, ಮತ್ತೊಂದು ಕಡೆ ಸಾಮಾನಾವಕಾಶಕ್ಕಾಗಿ ತುಡಿದ ಹೃದಯ ಇವೆಲ್ಲ ಸೇರಿ ಸಾಹಿತ್ಯ ಜಗತ್ತಿನಲ್ಲಿ ನೂತನ ಪ್ರಕಾರಕ್ಕೆ ತಕ್ಕ ಹಿನ್ನೆಲೆ ಒದಗಿಸಿದಂತೆ ಕಂಡು ಬರುತ್ತದೆ.

ಆದುವರೆಗೆ ಜೈನ ಧರ್ಮದ ಶಿಷ್ಟ ದನಿಯಾಗಿ ಮಾತ್ರವೇ ಇದ್ದ ಸಾಹಿತ್ಯ ವಚನ ಮಾಧ್ಯಮದಲ್ಲಿ ಜನಸಾಮಾನ್ಯರ ಅಂತರಂಗದ ದನಿಯಾಗಿಯೂ ಮಿಡಿಯಲು ಸಾಧ್ಯವಾಯಿತು. ಧಾರ್ಮಿಕ ಆಂದೋಲನದ ಪ್ರತಿಫಲಗಳಾಗಿರುವಂತೆ ವಚನಗಳು ಸಾಧಕ ಮನೋವಿಕಾಸದ ತುಡಿತಗಳಾಗಿಯೂ ದಾಖಲಾಗುತ್ತವೆ.

ಹೀಗೆ ಒಂದೆಡೆ ಬದಲಾಗುತ್ತಿದ್ದ ಧಾರ್ಮಿಕ ರಂಗ, ಮತ್ತೊಂದೆಡೆ ತತ್ಫಲವಾಗಿ ಉದ್ಭವಿಸುತ್ತಿದ್ದ ನೂತನ ಸಾಮಾಜಿಕರಂಗ, ಕ್ರಿಯಾಶೀಲವಾಗಲು ಹೊರಟ ಫಲವೇ ವಚನ ಸಾಹಿತ್ಯ.

## 3.3 ವಚನ ಸಾಹಿತ್ಯ ಎಂದರೇನು?

ನಡುಗನ್ನಡ ಸಾಹಿತ್ಯದಲ್ಲಿ ಉಗಮಗೊಂಡು, ಅದೇ ಕಾಲಾಧಿಯಲ್ಲಿ ಬಹಳ ಪ್ರಚಾರವಾದ ಕನ್ನಡ ಸಾಹಿತ್ಯದ ಒಂದು ವಿಶೇಷ ಪ್ರಕಾರವೇ ವಚನ ಸಾಹಿತ್ಯ. ಕನ್ನಡದ ಆಡುಭಾಷೆಯನ್ನು ಬಳಸಿಕೊಂಡು ಅದಕ್ಕೆ ಹೊಸ ಶಕ್ತಿ, ರೂಪವನ್ನು ಕೊಡುವಲ್ಲಿ ಇದು ಮಹತ್ವದ ಪಾತ್ರವನ್ನು ವಹಿಸಿದೆ. ಅನುಭವ ಹಾಗೂ ಅಭಿವ್ಯಕ್ತಿ ಎರಡರಲ್ಲೂ ಈ ಪ್ರಕಾರ ಅತ್ಯಂತ ವಿಶೇಷವಾದುದ್ದಾಗಿದ್ದು, ಆಧುನಿಕ ಕನ್ನಡಕಾವ್ಯ ಪ್ರಕಾರಕ್ಕೂ ಪ್ರೇರಣೆ ನೀಡಿದೆ ಎಂದೂ ಹೇಳಲಾಗುತ್ತದೆ.

ವಚನ ಎಂದರೆ ಮಾತು. ಶರಣರು ಆಡಿದುದು, ನುಡಿದುದು, ಹೇಳಿದುದು ವಚನ ಸಾಹಿತ್ಯ. ಗದ್ಯರೂಪಕವನ್ನೆಲ್ಲ ಆರಂಭದಲ್ಲಿ ವಚನ ಎಂದೇ ಕರೆಯುತ್ತಿದ್ದರು. ಪ್ರಾಚೀನ ಚಂಪೂ ಕಾವ್ಯಗಳಲ್ಲಿ ಅಲ್ಲಲ್ಲಿ ಬರುತ್ತಿದ್ದ ಗದ್ಯಭಾಗಗಳನ್ನೂ 'ವಚನ' ಎಂದೇ ಕರೆಯಲಾಗುತ್ತಿತ್ತು. ವೀರಶೈವ ಶರಣರು ತಮ್ಮ ಅನುಭವ ನಿವೇದನೆಗೆ ಬೋಧನೆಗೆ ಬಳಸಿದ ಈ ಪ್ರಕಾರ ಗದ್ಯರೂಪದಲ್ಲಿದ್ದ ಕಾರಣದಿಂದ, ಅವರು ರಚಿಸಿದ್ದೂ 'ವಚನ' ಎಂದೇ ಗುರುತಿಲ್ಪಟ್ಟಂತೆ ತೋರುತ್ತದೆ.

'ವಚನ' ಎಂದರೆ ಕನ್ನಡ ಸಾಹಿತ್ಯದ ವಿಶೇಷ ಪ್ರಕಾರ, ಗದ್ಯದ ವಿಶಿಷ್ಟ ನಿರೂಪಣೆ ಎಂದಷ್ಟೇ ಅಲ್ಲದೆ ಮತ್ತೊಂದು ರೀತಿಯಲ್ಲೂ ಅದನ್ನು ಪ್ರಮುಖವಾಗಿ ಪರಿಗಣಿಸಲಾಗಿದೆ. ವಚನ ಸಾಹಿತ್ಯ ವೀರಶೈವ ಧರ್ಮದ ಸಾರಸಂಗ್ರಹ, ಅಧ್ಯಾತ್ಮ ಶಾಸ್ತ್ರ, ಷಟ್‌ಸ್ಥಲಶಾಸ್ತ್ರ, ಎಂಬುದಾಗಷ್ಟೇ ಅಲ್ಲದೆ ವಚನಗಳು 'ಕನ್ನಡದ ಶೈವಾಗಮಗಳು' 'ಕನ್ನಡದ ಉಪನಿಷತ್ತುಗಳು' ಎಂಬ ಮನ್ನಣೆಗೂ ಪಾತ್ರವಾಗಿದೆ. ಶಿವಶರಣರ ನಡೆನುಡಿಗಳೇ ವಚನಗಳಿಗೆ ಆಧಾರ. ಮುಖ್ಯವಾಗಿ ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾಮಾಜಿಕ ಏಳ್ಗೆಗಾಗಿ, ಜನ ಜಾಗೃತಿಗಾಗಿ ಶ್ರಮಿಸಿದವರು ಶರಣರು. ಸರ್ವರ ಉದ್ಧಾರಕ್ಕೆ ಪಣತೊಟ್ಟು ನಿಂತ ಶರಣರ ಸಾಧನೆ ವಚನಗಳ್ಲಿ ಮಡುಗಟ್ಟಿ ನಿಂತಿದೆ. ವೀರಶೈವಧರ್ಮದ ಉದಾತ್ತ ತತ್ವಗಳ ಸಾರ ಸಂಗ್ರಹವನ್ನು ನಾವು ವಚನಗಳಲ್ಲಿ ಕಾಣಬಹುದಾಗಿದೆ.

## 3.4 ವಚನ ಸಾಹಿತ್ಯದ ಉಗಮ

(ಅ) ವಚನ ಸಾಹಿತ್ಯದ ರಾಜಕೀಯ, ಧಾರ್ಮಿಕ ಸಾಮಾಜಿಕ, ಸಾಹಿತ್ಯಿಕ ಹಿನ್ನೆಲೆಗಳನ್ನು ಅಭ್ಯಸಿಸಿದಾಗ ವಚನ ಸಾಹಿತ್ಯ ಸೃಷ್ಟಿಗೆ ಎಂತಹ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾಗಿತ್ತು ಎಂಬುದನ್ನು

ನಾವು ಗಮನಿಸಿದ್ದೇವೆ. ಈ ಹಿನ್ನೆಲೆಗಳಲ್ಲಿ ಉದ್ಭವಿಸಿದ ವಚನ ಸಾಹಿತ್ಯದ ಉಗಮವನ್ನು ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿರುವುದನ್ನು ಕಾಣಬಹುದು. ಇದರ ಮೂಲವನ್ನು ಕೆಲವರು ಸಂಸ್ಕೃತ ಸಾಹಿತ್ಯದಲ್ಲಿಯೂ ಮತ್ತೆ ಕೆಲವರು ತಮಿಳು ಸಾಹಿತ್ಯದಲ್ಲಿಯೂ ಇನ್ನೂ ಕೆಲವರು ಕನ್ನಡ ದೇಶಿಸಾಹಿತ್ಯದಲ್ಲೂ ಅರಸಲು ಪ್ರಯತ್ನಿಸಿದ್ದಾರೆ.

ವಚನ ಉಗಮವನ್ನು ಕುರಿತಂತಹ ಕೆಲವು ಹೇಳಿಕೆಗಳನ್ನು ನಾವೀಗ ಗಮನಿಸೋಣ.

ರಂಗನಾಥ ದಿವಾಕರ ಅವರು ಸಾಧಕರಾಗಿದ್ದ ಶರಣು "ತಮ್ಮ ಸ್ವಭಾವ ಸ್ವಧರ್ಮಗಳಿಗನುಸಾರವಾಗಿ ನಡೆಯುತ್ತಿರುವಾಗ ಅವರು ಸ್ಫೂರ್ತಿಯಿಂದ ನುಡಿದುದೆ ವಚನವೆನಿಸಿತು" ಎನ್ನುತ್ತಾರೆ.

ಡಿ.ಎಲ್.ಎನ್. ಅವರು ವೀರಶೈವ ವಿಪ್ಲವದಿಂದಾಗಿ ದೇಶೀಯ ಪದ್ಯಭೇದಗಳು ಸಾಹಿತ್ಯದಲ್ಲಿ ವಿಶೇಷವಾಗಿ ತಲೆದೋರಿದ ಸಂದರ್ಭದಲ್ಲಿ "ವಚನಗಳ.. ಹೀಗೇ ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದು ಬಸವಣ್ಣನವರ ಮತ್ತು ಅವರ ಅನುಯಾಯಿಗಳ ನೇತೃತ್ವದಲ್ಲಿ ಅಗ್ರ ಸ್ಥಾನವನ್ನು ಸಾಹಿತ್ಯದಲ್ಲಿ ಪಡೆದಿರಬಹುದು" ಎಂದೂ ಶಿಷ್ಟವೀರಶೈವ ಕವಿಗಳು ವಚನ ರಚನೆ ಮಾಡಿಲ್ಲವೆಂಬ ಕಾರಣದಿಂದ "ಸಾಮಾನ್ಯ ಜನಸಮುದಾಯವೇ ವಚನೋತ್ಪತ್ತಿಗೆ ಮೂಲ ಸ್ಥಾನವೆಂದೆನಿಸುತ್ತದೆ. ಹೀಗಿದ್ದರೆ ವಚನಗಳು ಶುದ್ಧ ದೇಶೀಯ ಸಂಸ್ಕೃತಿಯಿಂದ ಮಿಂಚಿರಬೇಕೆಂದು ಹೇಳಬಹುದು" ಎಂದು ಹೇಳುತ್ತಾ, ಇತರ ದ್ರಾವಿಡ ಭಾಷೆಗಳಲ್ಲಿ ಎಲ್ಲಿಯೂ ಈ ಬಗೆಯ ಸಾಹಿತ್ಯ ಪ್ರಭೇದವಿಲ್ಲವೆಂಬುದರಿಂದ ತಮ್ಮ ಊಹೆಯನ್ನು ಸಮರ್ಥಿಸುತ್ತಾರೆ. ಆದರೂ ಅವರೇ ತಮಿಳುಶೈವದರ್ಶನವನ್ನು ವೀರಶೈವರು ಸ್ವೀಕರಿಸಿದಂತೆ ಅವರ ಧರ್ಮೋಪದೇಶ ತತ್ಪರವಾದ ಹಾಡುಗಳನ್ನೂ ಅಂಗೀಕರಿಸಿರಬಹುದೆಂದು, ತಮಿಳು ಶೈವ ಹಾಡುಗಳ ನಡುವೆ ವಚನಗಳ ಉಗಮವನ್ನು ಹುಡುಕಲು ಪ್ರಯತ್ನಿಸುತ್ತಾರೆ.

ಎಂ.ಆರ್.ಶ್ರೀ ಯವರು ಇತರ ಭಾಷೆಗಳ ಪ್ರಭಾವ ವಚನಕಾರರಲ್ಲಿ ಕಂಡು ಬಂದರೂ 'ವಚನ ಸಾಹಿತ್ಯ ಎರವಲು ತಂದದ್ದಲ್ಲ, ಅದು ಕನ್ನಡದ ಸ್ವಾರ್ಜಿತ ಸ್ವತ್ತು. ವಚನ ಕಾರರು ಸಂಸ್ಕೃತದ ಆಚಾರ್ಯರಲ್ಲ, ಅವರು ಅಚ್ಚಕನ್ನಡದಬೇಸಾಯಗಾರರು" ಎಂದು ಕನ್ನಡ ಮೂಲವನ್ನು ಸಮರ್ಥಿಸಿದ್ದಾರೆ.

ಎಲ್.ಬಸವರಾಜು ಅವರು 'ಶರಣರ ಈ ವಚನ ಸಾಹಿತ್ಯ ಪ್ರಾಕಾರಕ್ಕೆ ಸಂಸ್ಕೃತದಲ್ಲಿರುವ ಸ್ತೋತ್ರಗದ್ಯ ಸಾಹಿತ್ಯವೇ ಮೂಲವೂ ಪ್ರೇರಕವೂ ಆಗಿರಬಹುದು. ಆದ್ದರಿಂದ ಕನ್ನಡ ವಚನಪ್ರಕರಕ್ಕೆ ಬಾಹ್ಯ ರೂಪ ರಚನಾ ದೃಷ್ಟಿಯಿಂದ ತಮಿಳು ಸಾಹಿತ್ಯದ ಸಂಬಂಧವಿಲ್ಲವೆನ್ನಬಹುದು' ಎಂದು ಹೇಳುತ್ತಾ ಸಂಸ್ಕೃತದಲ್ಲಿ ವಚನಗಳ ಮೂಲವನ್ನು ಅರಸಿದ್ದಾರೆ.

ಎಂ. ಚಿದಾನಂದ ಮೂರ್ತಿಯವರು ಅಚ್ಚಕನ್ನಡ ಛಂದಸ್ಸಾದ ತ್ರಿಪದಿಗಳಲ್ಲಿ ವಚನಗಳ ಮೂಲವನ್ನು ಹುಡುಕುತ್ತಾ "ವಚನ ರಚನೆಯ ಮೂಲವನ್ನು ಅನ್ಯಬಾಷಾ ಸಾಹಿತ್ಯಗಳಲ್ಲಿ ಹುಡುಕುವುದಕ್ಕಿಂತ ನಮ್ಮ ಕನ್ನಡದಲ್ಲಿಯೇ ಹುಡುಕುವುದು ಹೆಚ್ಚು ಸೂಕ್ತ, ಫಲಕಾರಿ " "ವಚನಗಳು ಯಾವದೇ ಹೊರಗಿನ ಮಾದರಿಯನ್ನು ಅನುಸರಿಸಿ ಅಥವಾ ಅನುಕರಿಸಿಹುಟ್ಟಿದುವಲ್ಲ ಎಂಬುದು ಬಹುಮಟ್ಟಿಗೆ ಖಚಿತ. ಪರಿಸರದ ಒತ್ತಡ ಅಥವಾ ಅಗತ್ಯದ ಅನಿವಾರ್ಯತೆಯಿಂದಾಗಿ ಆ ಪ್ರಕಾರ ಒಂದು ರೂಪವನ್ನು ಪಡೆದುಕೊಂಡಿತು" ಎಂದು ವಚನಕಾರರೇ ವಚನಗಳ ಮೂಲಿಗರು ಎಂಬುದಾಗಿ ಅಭಿಪ್ರಾಯ ಪಡುತ್ತಾರೆ.

ರಂ.ಶ್ರೀ. ಮುಗಳಿಯವರು "ಕಾಲಮಾನದ ಅಗತ್ಯ ಮತ್ತು ನಿರ್ಮಿತಿ ಇವುಗಳ ಸಹಜ ಸಂಯೋಗದ ಸಂಕೇತವಾಗಿ ವಚನ ರೂಪವು ಜನ್ಮ ತಾಳಿತು. ಮಾರ್ಗ ಕಾವ್ಯದ ಯಾವ ರೂಪವೂ ಹೊಸ ದರ್ಶನಕ್ಕೆ

ಅನುಗುಣವಾಗಿರಲಿಲ್ಲ. ಹಳೆಯದರ ಗುಣಾಂಶವನ್ನೊಳಗೊಂಡ ಹೊಸರೂಪ ಅಗತ್ಯವಾಗಿತ್ತು. ಅದೇ ವಚನ ರೂಪ. ವಚನ ಸಾಹಿತ್ಯ ವೀರಶೈವ ದರ್ಮದಂತೆ ಸ್ವತಂತ್ರಮೂಲವಾಗಿದ್ದು ಇತರ ಸಾಹಿತ್ಯಗಳ ಪ್ರಭಾವವನ್ನು ತನ್ನ ವಿಚಾರಧಾರೆಗೆ ಮತ್ತು ಅಭಿವ್ಯಕ್ತಿಮಾರ್ಗಕ್ಕೆ ಅನುಗುಣವಾಗಿರುವಷ್ಟನ್ನು ಮಾತ್ರ ಸ್ವೀಕರಿಸಿದೆ. ಆದ್ದರಿಂದ ವಚನಗಳು ಕನ್ನಡದ ಸ್ವಾರ್ಜಿತ ಸೊತ್ತು" ಎನ್ನುತ್ತಾರೆ.

ವಿದ್ವಾಂಸರ ಮೇಲಿನ ಅಭಿಪ್ರಾಯಗಳಿಂದ ಒಡಮೂಡುವುದು ವಚನಗಳು

1. ತಮಿಳು, ಸಂಸ್ಕೃತಭಾಷೆ ಸಾಹಿತ್ಯಗಳಿಂದ ಪ್ರಭಾವಿತವಾದುವು.
2. ಕನ್ನಡ ಸಾಹಿತ್ಯದ ದೇಶ್ಯ ಪ್ರಕಾರದಿಂದ ಪ್ರಭಾವಿತವಾದುವು.
3. ವಚನಕಾರರ ಸ್ವಾನುಭವದಿಂದಲೇ ಮೂರ್ತಿಗೊಂಡವುಗಳು ಎಂಬ ಮೂರು ಬಗೆಯ ಅಭಿಪ್ರಾಯಗಳು.

ಮೇಲಿನ ಮೂರು ಅಂಶಗಳಲ್ಲಿ ವಚನ ಸಾಹಿತ್ಯಕ್ಕೆ ವಚನಕಾರರೇ ಮೊದಲಿಗರು ಎಂಬುದು ಮೂರನೆಯದು. ನಾವು ಈಗಾಗಲೇ ಗಮನಿಸಿರುವ ಹಿನ್ನೆಲೆಗಳನ್ನು ಆಧರಿಸಿ ಹೇಳುವುದಾದಲ್ಲಿಯೂ ಈ ಅಭಿಪ್ರಾಯವೇ ಹೆಚ್ಚು ಸೂಕ್ತವೆನಿಸುತ್ತದೆ. ರಾಜಕೀಯವಾಗಿ ನೋಡಿದಾಗ ೧೧ -೧೨ನೆಯ ಶತಮಾನಗಳಲ್ಲಿ ಕರ್ನಾಟಕದ ರಾಮಮನೆತನಗಳು ತಮ್ಮತಮ್ಮ ಬಡಿದಾಟಗಳಲ್ಲಿ ಜನ ಸಾಮಾನ್ಯರನ್ನು ಅಲಕ್ಷಿಸಿದ್ದವು. ಧಾರ್ಮಿಕವಾಗಿ ಹೇಳುವುದಾದರೆ ಒಂದು ಕಾಲಕ್ಕೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಬೌದ್ಧ ಜೈನ ಧರ್ಮಗಳು ಹಾಗೂ ಹಿಂದೂ ಧರ್ಮ ತಮ್ಮ ಮೂಲೋದ್ದೇಶಗಳನ್ನು ಮರೆತು ಸಂಪ್ರದಾಯ, ವ್ರತಾಚರಣೆ, ಸಂಕುಚಿತ ಮನೋಭಾವಗಳಿಂದ ಸಾಮಾನ್ಯ ಜನತೆಯ ನಂಬಿಕೆಗಳನ್ನು ಗಳಿಸುವಲ್ಲಿ ವಿಫಲವಾಗಿದ್ದವು. ಸಾಮಾಜಿಕವಾಗಿ ಗಮನಿಸಿದಾಗ ಜಾತಿ, ಮತ, ಪಂಥ, ವರ್ಗ, ಲಿಂಗ ಭೇದಗಳಿಂದ ಸಮಾಜದಲ್ಲಿ ಸುಭದ್ರತೆಯಿಲ್ಲದೆ, ರಾಜರ ಕಿತ್ತಾಟದಿಂದ ಜನರ ಉದ್ಧಾರದಲ್ಲಿ ಗಮನ ತೋರುವವರಿಲ್ಲದೆ, ಅವ್ಯವಸ್ಥೆ ತಲೆದೋರಿತ್ತು. ಸಾಹಿತ್ಯಿಕವಾಗಿ ಅವಲೋಕಿಸಿದರೆ ಬಹುಸಂಖ್ಯಾತ ಸಾಮಾನ್ಯವಾದ ಕಾವ್ಯ ಕಲೆಯ ಆಸ್ವಾದದಿಂದ ವಂಚಿತರಾಗಿ ನೂತನ ಪ್ರಕಾರದ ಆವಿಷ್ಕಾರಕ್ಕೆ ಸೂಕ್ತ ಸನ್ನಿವೇಶ ಒದಗಿಬಂದಿತ್ತು. ಈ ನಡುವೆ ಇಸ್ಲಾಂ ಧರ್ಮದ ಆಕ್ರಮಣಶೀಲತೆಯಿಂದೊದಗಿದ ಭಯ ಆತಂಕ ಜನತೆಯನ್ನು ಕಂಗೆಡಿಸಿದ್ದವು. ಇಂತಹ ಸಮಯದಲ್ಲಿ ಸಮಾಜದ ಉದ್ಧಾರಕ್ಕೆ ಶ್ರಮಿಸುವ, ಸುಜನಜಾಗೃತಿಯುಂಟುಮಾಡುವ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾಗಿತ್ತು, ಈ ಕಾರಣಗಳಿಂದ ತಮಿಳು ನಾಡಿನಲ್ಲಿ ಹುಟ್ಟಿಕೊಂಡಿದ್ದ ಭಕ್ತಿಯ ಆಂದೋಲನ ಕರ್ನಾಟಕದ ಮೂಲಕ ಎಲ್ಲೆಡೆ ವ್ಯಾಪಿಸಿತು. ಸಮಾಜದ ಆಮೂಲಾಗ್ರ ಪರಿವರ್ತನೆಯನ್ನು ಧ್ಯೇಯವಾಗಿಟ್ಟುಕೊಂಡ ವೈಚಾರಿಕ ಕ್ರಾಂತಿಗೆ, ವಚನಸಾಹಿತ್ಯ ಮಾಧ್ಯಮ, ಅಗತ್ಯವಾದ ತಳಹದಿಯನ್ನು ನಿರ್ಮಿಸಿಕೊಟ್ಟಿತು.

ಮೇಲು-ಕೀಳು, ಗಂಡು-ಹೆಣ್ಣು, ಬಡವ-ಬಲ್ಲಿದ ಎಂಬ ಅಂತರಗಳನ್ನು ಹಿಮ್ಮೆಟ್ಟಿಸಿ ಸರ್ವರೂ ಸಮಾನರು ಎಂಬ ಆಶಯದೊಂದಿಗೆ ವಚನ ಸಾಹಿತ್ಯ ಉಗಮಿಸಿತು. ರಾಜಾಶ್ರಯದಲ್ಲಿ ಪಂಡಿತರ ಸೊತ್ತಾಗಿದ್ದ ಸಾಹಿತ್ಯ ಜನ ಸಾಮಾನ್ಯರ ಹೃದಯ ಸಿಂಹಾಸನದಲ್ಲಿ ವಿರಾಜಿಸಲಾರಂಭಿಸಿತು. ವಸ್ತು, ರೀತಿ, ಛಂದಸ್ಸು, ರಸ - ಎಲ್ಲ ದೃಷ್ಟಿಗಳಿಂದಲೂ ಸ್ವತಂತ್ರ ಮನೋಗುಣದೊಂದಿಗೆ ಹೊಮ್ಮಿದ ವಚನ ಸಾಹಿತ್ಯ ಸಮೃದ್ಧವಾಗಿ ಬೆಳೆದು ಬಂದುಹೊಸ ಮನ್ವಂತರಕ್ಕೆ ಕಾರಣವಾಯಿತು. ಅನ್ಯಬಾಷಾ ಪ್ರಭಾವವನ್ನು ಅಲ್ಲಗಳೆಯುಂತಿಲ್ಲವಾದರೂ ವಚನ ಸಾಹಿತ್ಯ ನಿರ್ಮಾಣಕ್ಕೆ ಅದೇ ಮೂಲ ಕಾರಣವಲ್ಲ. ಶ್ರೀಸಾಮಾನ್ಯನಿಂದ ಸಹಜಸ್ಫೂರ್ತಗೊಂಡು ಉಗಮಿಸಿದ ವಚನ ಸಾಹಿತ್ಯಕ್ಕೆ ಜನಪದ ಶಕ್ತಿಯೇ ಮೂಲಾಧಾರವಾಗಿದೆ. ವೀರಶೈವ ಶರಣರ ಹೃದಯದ ಸೊಲ್ಲುಗಳಾಗಿ ಜನಿಸಿದ ವಚನ ಸಾಹಿತ್ಯಕ್ಕೆ ವಚನಕಾರರೇ ಮೂಲಿಗರು ಎಂಬುದು ಅತ್ಯಂತ ಸಮರ್ಥನೀಯವಾದ ಅಭಿಪ್ರಾಯವಾಗಿದೆ. ವಚನಗಳು ವೀರಶೈವ ಕ್ರಾಂತಿಯ ಫಲಗಳೆಂದರೆ ಅತಿಶಯೋಕ್ತಿಯಲ್ಲ.

## 3.5 ವಚನ ಸಾಹಿತ್ಯದ ಬೆಳವಣಿಗೆ

(ಅ) ವಚನ ಸಾಹಿತ್ಯ ವೆಂದರೇನು? ಅದರ ಉಗಮಕ್ಕೆ ಒದಗಿ ಬಂದ ಹಿನ್ನಲೆಗಳು ಯಾವುವು? ಎಂಬುದನ್ನು ಈವರೆಗೆ ಗಮನಿಸಿದ್ದೇವೆ. ಈಗ ಕನ್ನಡ ಸಾಹಿತ್ಯೇತಿಹಾಸದಲ್ಲಿ ವಚನ ಸಾಹಿತ್ಯ ಹೇಗೆ ಬೆಳೆದು ಬಂದಿದೆ ಎಂಬುದನ್ನು ಕುರಿತು ವಿಚಾರ ಮಾಡೋಣ.

ಕನ್ನಡದಲ್ಲಿ ವಚನ ಸಾಹಿತ್ಯ ಯಾವಾಗ ಆರಂಭವಾಯಿತು ಎಂಬುದನ್ನು ಅರಿಯಲು ಖಚಿತ ಆಧಾರಗಳು ದೊರಕುವುದಿಲ್ಲ. ಸ್ಥೂಲವಾಗಿ ಬಸವಪೂರ್ವಕಾಲೀನ ಆದ್ಯ ವಚನಕಾರರಿಂದಲೇ ವಚನ ಸಾಹಿತ್ಯ ಆರಂಭವಾಯಿತೆಂದು ಭಾವಿಸಲಾಗಿದೆ. ಇದಕ್ಕೆ ಕಾರಣ ಬಸವನಿಂದಲೆ ಸ್ತುತಿಸಲ್ಪಟ್ಟಿರುವ ಕೆಲವು ಹಿರಿಯವಚನಕಾರರು ಹಾಗೂ ಬಸವನ ಕಲಾಕ್ಕಾಗಲೇ ಪಕ್ವತೆ ಪಡೆದಿದ್ದ ಸಾಹಿತ್ಯ ಇವು ಅವನಿಗಿಂತ ಪೂರ್ವದಲ್ಲೇ ವಚನ ಸಾಹಿತ್ಯದ ಕೃಷಿ ಆರಂಭವಾಗಿತ್ತು ಎನ್ನುವುದಕ್ಕೆ ಪೂರಕವಾಗಿವೆ. ಸು. ೧೧೩೦ ರಲ್ಲಿದ್ದರು ಎಂದು ನಿರ್ಧರಿಸಿಲ್ಪಟ್ಟಿರುವ, ಬಸವಣ್ಣನಿಂದ ಉಕ್ತರಾದ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಇವರಿಂದ ಅಥವಾ ಇವರಿಗಿಂತಲೂ ಸ್ವಲ್ಪ ಹಿಂದಿನಿಂದ ವಚನಸಾಹಿತ್ಯ ಆರಂಭವಾಗಿರಬಹುದೆಂದು ಊಹಿಸಲಾಗಿದೆ. ಸರಿಸುಮಾರಾಗಿ ಹೇಳುವುದಾದರೆ ವಚನ ಸಾಹಿತ್ಯ ೧೧ನೇ ಶ.ದ ಅಂತ್ಯದಲ್ಲಿ ೧೨ನೇ ಶದ ಆರಂಭದಲ್ಲಿ ಕನ್ನಡದಲ್ಲಿ ಉದಯವಾಯಿತು ಎಂದು ಭಾವಿಸಬಹುದು.

ವಚನ ಸಾಹಿತ್ಯೇತಿಹಾಸವನ್ನು ಮೂರು ಹಂತಗಳಲ್ಲಿ ಅಭ್ಯಾಸಮಾಡುವುದು ಸೂಕ್ತವಾದುದು. ೧. ಬಸವಪೂರ್ವ ೨. ಬಸವಣ್ಣನ ಕಾಲ ೩. ಬಸವಾನಂತರ ಎಂಬ ಘಟ್ಟಗಳಲ್ಲಿ ವಚನ ಸಾಹಿತ್ಯವನ್ನು ನಾವೀಗ ಗಮನಿಸೋಣ.

ಬಸವ ಪೂರ್ವ ವಚನಕಾರರ ಸಂಖ್ಯೆ ಎಷ್ಟು ಎಂಬುದು ಖಚಿತವಾಗಿ ತಿಳಿದು ಬರುವದಿಲ್ಲ. ಇವರನ್ನು ಆದ್ಯವಚನಕಾರರು ಎಂದು ಕರೆಯಲಾಗಿದೆ. ಬಸವಣ್ಣನಿಗಿಂತ ಒಂದು ಶತಮಾನದಷ್ಟು ಹಿಂದೆ ಇವರಿದ್ದಿರಬಹುದು ಎಂದು ಅಭಿಪ್ರಾಯಪಡುತ್ತಾರೆ. ಆರಂಭದಲ್ಲಿ ಸು. ೧೦೫೦ರಲ್ಲಿದ್ದ ಜೇಡರ ದಾಸಿಮಯ್ಯನೆ ವಚನ ಸಾಹಿತ್ಯದ ಮೂಲಪುರುಷ ಎಂದು ಭಾವಿಸಲಾಗಿತ್ತು. ಈಗ ಆತನ ಕಾಲ ಸು. ೧೧೪೦ರಲ್ಲಿದ್ದ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ ಇವರಿಂದ ಅಥವಾ ಇವರಿಗಿಂತಲೂ ಹಿಂದಿನಿಂದ ವಚನ ಸಾಹಿತ್ಯ ಆರಂಭವಾಯಿತು ಎಂದು ಸದ್ಯಕ್ಕೆ ಪರಿಗಣಿಸುತ್ತಾರೆ.

ಬಸವ ಪೂರ್ವ ವಚನಕಾರರಲ್ಲಿ ಓಹಿಲ, ಉದ್ಭಟ, ಕೆಂಬಾವಿ ಭೋಗಣ್ಣ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಜೇಡರ ದಾಸಿಮಯ್ಯ ಮೊದಲಾದವರು ಬರುತ್ತಾರೆ ಎಂದು ವಿದ್ವಾಂಸರಲ್ಲಿ ಕೆಲವರು ತಿಳಿಸುತ್ತಾರೆ. ಮೇಲಿನವರಲ್ಲದೆ ಕೊಂಡಗುಳಿ ಕೇಶಿರಾಜ, ಚಂದಿಮರಸ, ಶಂಕರ ದಾಸಿಮಯ್ಯ, ಸಕಲೇಶಮಾದರಸ, ಮೆಚೆ ಮಿಂಡಯ್ಯ ಮತ್ತಿತರರನ್ನೂ ಬಸವಾದಿ ಪ್ರಮಥರ ಪೂರ್ವದಲ್ಲಿ ನಿಲ್ಲಿಸಿ ಕೆಲವರು ನೋಡುತ್ತಾರೆ. ಮೇಲಿನ ವಚನಕಾರರಲ್ಲಿ ಮಾದಾರಚೆನ್ನಯ್ಯ ಡೋಹರ ಕಕ್ಕಯ್ಯ, ಜೇಡರ ದಾಸಿಮಯ್ಯರ ವಚನಗಳು ಮಾತ್ರ ಸದ್ಯಕ್ಕೆ ಉಪಲಬ್ಧವಾಗಿದ್ದು ಉಳಿದವರ ಬಗ್ಗೆ ಸೂಕ್ತ ಮಾಹಿತಿಗಳು ದೊರಕುವುದಿಲ್ಲ.

ಬಸವನ ಪೂರ್ವಕಾಲಕ್ಕೆ ಮೊದಲೇ ಪರಿಣತ ಭಾಷಾಸಿದ್ಧಿಯಿಂದ ಕೂಡಿದ ವಚನ ಸಾಹಿತ್ಯ ಸಮಾಜದ ಆಮೂಲಾಗ್ರ ಪರಿವರ್ತನೆಗೆ ಪ್ರಯತ್ನಸುತ್ತಿತ್ತು ಎಂಬುದು ತಿಳಿದುಬರುತ್ತದೆ. ಬಸವಾದಿಗಳಿಗೊಂದು ವಚನ ಮಾರ್ಗ ಮೊದಲೇ ಸೃಷ್ಟಿಗೊಂಡದ್ದು ಕಂಡು ಬರುತ್ತದೆ. ಹೆಣ್ಣು-ಗಂಡು, ಮೇಲು - ಕೀಳು, ಬಡವ-ಬಲ್ಲಿದ ಎಂಬ ಅಂತರ ತೊಡೆದು ಅಸಂಖ್ಯಜನ ಆಂದೋಲನಕ್ಕೆ ಅಣಿಗೊಂಡದ್ದು ವೇದ್ಯವಾಗುತ್ತದೆ. ಪ್ರೌಢವಾದ ವಿಚಾರ ಸರಣಿ, ಪರಿಪಕ್ವ ಭಾಷೆ, ಹರಿತವಾದ ವಿಡಂಬನೆ, ಹೃದಯ ವಂತಿಕೆಗಳಿಂದ ಕೂಡಿರುವ ಬಸವ ಪೂರ್ವಯುಗದ ವಚನ ಸಾಹಿತ್ಯ ಬಸವಕಾಲದ ಕ್ರಾಂತಿಗೆ ಸೂಕ್ತ ತಳಹದಿ ನಿರ್ಮಿಸಿಕೊಟ್ಟಿದ್ದು ವಿಶೇಷ ಅಂಶವಾಗಿದೆ.

ಹೀಗೆ ಬಸವನಿಗಿಂತ ಮುಂಚೆ ಪ್ರಚಾರದಲ್ಲಿದ್ದ ವಚನ ಸಾಹಿತ್ಯ ಮುಂದೆ ಬಸವಾದಿಗಳಿಂದ ಪರಿಣತಾವಸ್ಥೆಯನ್ನು, ಪರಿಪಕ್ವತೆಯನ್ನು, ಪಡೆದು ಪ್ರವರ್ಧಮಾನಕ್ಕೆ ಬಂದಿತು. ಆದುವರೆಗೂ ಗುಪ್ತವಾಗಿದ್ದ ಅಂತರಂಗ ಶಕ್ತಿ ಬಸವನ ನೇತೃತ್ವದಲ್ಲಿ ಬಹಿರಂಗವಾಗಿ ನಾಡಿನ ಮೂಲೆಮೂಲೆಗೆ ವ್ಯಾಪಿಸಿತು. ಉನ್ನತ ಹುದ್ದೆ, ವ್ಯಕ್ತಿತ್ವಗಳೆರಡನ್ನೂ ಪಡೆದಿದ್ದ ಬಸವಣ್ಣನಿಂದ ಅಡಗಿದ್ದ ಆಂದೋಲನಕ್ಕೆ ಚಾಲನೆ ಸಿಕ್ಕಂತಾಯಿತು. ಅಸಂಖ್ಯಾತ ಶರಣರಿಂದ ವಚನಕಾರರಿಂದ ಸುತ್ತುವರಿಯಲ್ಪಟ್ಟ ಬಸವಣ್ಣ ಅಂದು ನಡೆದ ಸಾಮಾಜಿಕ, ಧಾರ್ಮಿಕ ಕ್ರಾಂತಿಯ ನೇತಾರನಾಗಿ ಮುನ್ನಡೆದ. ಆತನ ಮಹಾಮನೆಯಂತೆ ಅನುಭವ ಮುಂಟಪದಂತಹ ತಾಣಗಳು ಶರಣರ ವಿಚಾರ ಮಂಥನಕ್ಕೆ ವೇದಿಕೆಯಾದವು. ಸಮಾಜದ ಎಲ್ಲ ಸ್ತರದ ಬಗೆ ಬಗೆಯ ಕಾಯಕದ ಹೆಣ್ಣುಗಂಡುಗಳು ಸೇರಿ ವೀರಶೈವ ಕ್ರಾಂತ ದೃಷ್ಟಿಯನ್ನು ಬಿತ್ತಿಬೆಳೆವಲ್ಲಿ ನಿರತರಾದರು. ನುಡಿದಂತೆ ನಡೆದು, ನಡೆದಂತೆ ನುಡಿದು ವಚನ ಸಿರಿಯ ಹಿರಿಮೆಗೆ ಕಾರಣಕರ್ತರಾದರು. ಸಮಾಜದ ಉದ್ಧಾರಕ್ಕಾಗಿ ಸಮಾಜದ ಬೆನ್ನೆಲುಬಾದ ಸಾಮಾನ್ಯ ಜನತೆ ಕಟಿಬದ್ಧವಾಗಿ ನಿಂತು ವಚನ ಸಾಹಿತ್ಯ ಸುಗ್ಗಿಯಲ್ಲಿ ಪಾಲ್ಗೊಂಡರು.

ಬಸವಣ್ಣನ ಸಮಕಾಲೀನ ವಚನಕಾರರ ಸಂಖ್ಯೆ ಎಷ್ಟು ಎಂಬುದೂ ನಿಖರವಾಗಿ ತಿಳಿದು ಬರುವುದಿಲ್ಲ. ಸಕಲೇಶಮಾದರಸ, ಅಲ್ಲಮ ಪ್ರಭು, ಚನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ, ಅಂಭಿಗರ ಚೌಡಯ್ಯ, ಮೋಳಿಗೆ ಮಾರಯ್ಯ, ಆಯ್ದಕ್ಕಿ ಮಾರಯ್ಯ, ಮಧುವಯ್ಯ, ತುರುಗಾಹಿ ರಾಮಣ್ಣ, ಉರಿಲಿಂಗದೇವ, ಗಜೇಶಮಸಣಯ್ಯ, ಶಾಂತರಸ, ಡಕ್ಕೆಯ ಬೊಮ್ಮಣ್ಣ, ಮಾದಾರ ಧೂಳಯ್ಯ, ಕಲಕೇತ ಬೊಮ್ಮಯ್ಯ, ನಗೆಯ ಮಾರಿತಂದೆ, ಕೋಲಶಾಂತಯ್ಯ, ಮೇಜಿಮಿಂಡಯ್ಯ, ಎಚ್ಚರಿಕೆ ಕಾಯಕದ ಮುಕ್ತಿನಾಥ, ಒಕ್ಕಲು ಮುದ್ದಯ್ಯ, ಮೇದರ ಕೇತಯ್ಯ, ಕಿನ್ನರಿ ಬೊಮ್ಮಯ್ಯ, ಹೆಂಡದ ಮಾರಯ್ಯ, ಉಗ್ಘಡಿಸುವ ಖಿಬ್ಬಿದೇವಯ್ಯ, ಅಸಾಮಿಕಸಾಚಯ್ಯ, ಕನ್ನಡಿ ಕಾಯಕದ ಅಮ್ಮಿದೇವಯ್ಯ, ಮಲಹರಕಾಯಕದ ಚಿಕ್ಕದೇವಯ್ಯ, ವೈದ್ಯ ಸಂಗಣ್ಣ ಮುಂತಾದ ಹಿರಿಯ ಹಾಗೂ ಕಿರಿಯ ವಚನಕಾರರು ಬಸವಣ್ಣನ ಸುತ್ತಮುತ್ತ ಇದ್ದುಕೊಂಡು ಅಸಂಖ್ಯಾತ ಶಿವಶರಣೆಯರೂ ಪಾಲ್ಗೊಂಡಿದ್ದಾರೆ. ಮಹಾದೇವಿಯಕ್ಕ, ಮುಕ್ತಾಯಕ್ಕ, ನೀಲಮ್ಮ, ಸತ್ಯಕ್ಕ, ಲಿಂಗಮ್ಮ, ಮೋಳಿಗೆಯ ಮಹಾದೇವಿ, ಆಯ್ದಕ್ಕಿಲಕ್ಕಮ್ಮ, ಅಕ್ಕನಾಗಮ್ಮ, ಗಂಗಾಬಿಕೆ, ಬೊಂತಾದೇವಿ, ಗೊಗ್ಗವ್ವೆ, ಕದಿರ ರಮ್ಮವ್ವೆ, ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ, ರೇವಣ ಸಿದ್ದಯ್ಯಗಳ ಪುಣ್ಯಸ್ತ್ರೀ ರೇಕಮ್ಮ, ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ, ನಾಗಿದೇವಯ್ಯಗಳ ಪುಣ್ಯಸ್ತ್ರೀ ಮಸಣಮ್ಮ, ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ, ಕೊಂಡೆ ಮಂಚಣ್ಣಗಳ ಪುಣ್ಯಸ್ತ್ರೀ ಲಕ್ಷ್ಮಮ್ಮ, ಕಾಲಕಣ್ಣಿಯ ಕಾಮಮ್ಮ, ರೇಚವ್ವೆ, ಕೇತಲದೇವಿ, ಕೊಟ್ಟಣದ ಸೋಮಮ್ಮ, ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ, ದಸರಯ್ಯಗಳ ಪುಣ್ಯಸ್ತ್ರೀ ವೀರಮ್ಮ, ಬತ್ತಲೇಶ್ವರನ ಪುಣ್ಯಸ್ತ್ರೀ ಗುಡ್ಡವ್ವೆ, ಅಕ್ಕಮ್ಮ, ಕದಿರಕಾಯಕದ ಕಾಳವ್ವೆ, ಅಮುಗೆರಾಯಮ್ಮ ಮೊದಲಾದ ಅನೇಕ ಶರಣೆಯರೂ ಬಸವನ ಸನಿಹದಲ್ಲಿದ್ದು ಅಸಂಖ್ಯಾತ ವಚನಗಳನ್ನು ರಚನೆ ಮಾಡಿದ್ದಾರೆ.

ಹೀಗೆ ಹೆಣ್ಣು ಗಂಡೆನ್ನದೆ ಆ ಕಾಲದ ಎಲ್ಲ ಜಾತಿಯ, ಎಲ್ಲ ವರ್ಗದ ಜನರೂ ಬಸವಣ್ಣನ ನೇತೃತ್ವದಲ್ಲಿ ವೀರಶೈವ ಧರ್ಮದಡಿ ಒಗ್ಗೂಡಿ ವಚನ ಸಾಹಿತ್ಯದ ಮಹಾಪೂರವನ್ನೇ ಹರಿಸಿದ್ದಾರೆ. ಮುಂದೆ ಕಲ್ಯಾಣದಲ್ಲಿ ನಡೆದ ಕ್ಷಿಪ್ರಕ್ರಾಂತಿಯಿಂದಾಗಿ ಈ ಚಳವಳಿಗೆ ಧಕ್ಕೆಯುಂಟಾಗಿ ಶರಣ-ಶರಣೆಯರೆಲ್ಲ ಚೆದುರಿ ಹೋಗಬೇಕಾಯಿತು. ಬೇರೆ ಬೇರೆ ಹೋದಲ್ಲಿಯೂ ತಮ್ಮಿಂದ ಸಾಧ್ಯವಾದಷ್ಟು ವಚನಸಾಹಿತ್ಯ ಪ್ರಸಾರದೊಂದಿಗೆ ಆಧ್ಯಾತ್ಮ ಸಾಧನೆಯಲ್ಲಿ, ಸಮಾಜೋದ್ಧಾರ ಕಾರ್ಯದಲ್ಲಿ ಅವರು ತೊಡಗಿದುದನ್ನು ಕಾಣಬಹುದು.

ಬಸವ ಯುಗದಲ್ಲಿ ಉತ್ಕರ್ಷವನ್ನು ಕಂಡು ಅಂತ್ಯದಲ್ಲಿ ಒಡೆದು ಕಳಾಹೀನಗೊಂಡ ವಚನ ಚಳವಳಿ ವಿಜಯನಗರಕಾಲದಲ್ಲಿ ಮತ್ತೊಮ್ಮೆ ಪುರುಜೀವನ ಪಡೆಯಿತು. ವಿಶೇಷತಃ ಪ್ರೌಢದೇವರಾಯನ ಕಾಲದಲ್ಲಿದ್ದ ನೂರೊಂದು ವಿರಕ್ತರು ವಚನಗಳನ್ನು ಸಂರಕ್ಷಿಸುವ ವ್ಯವಸ್ಥಿತವಾಗಿ ಏಂಗಡಿಸಿ ುವ, ಟೀಕೆಗಳನ್ನು ರಚಿಸುವ ಕಾರ್ಯದಲ್ಲಿ ನಿರತರಾಗಿ ವೀರಶೈವ ಪುನರುಜ್ಜೀವನಕ್ಕಾಗಿ

ಶ್ರಮಿಸಿದರು. ಇಷ್ಟಾದರೂ ಈ ಕಾಲದ ಶರಣರು ಹೆಚ್ಚಾಗಿ ಸ್ವತಂತ್ರ ವಚನಗಳನ್ನು ರಚಿಸಿದಂತೆ ಕಂಡು ಬರುವುದಿಲ್ಲ. ತೋಂಟದ ಸಿದ್ಧಲಿಂಗಯತಿ, ಅವನ ಶಿಷ್ಯ ಸ್ವತಂತ್ರ ಸಿದ್ಧಲಿಂಗೇಶ್ವರ, ಮುದ್ದುವೀರಸ್ವಾಮಿ, ಘನಲಿಂಗ, ನಿರಾಲಂಬಶರಣ ಮೊದಲಾದ ಬೆರಳೆಣಿಕೆಯಷ್ಟು ಜನ ವಚನಕಾರರು ವಚನ ರಚನೆಯಲ್ಲಿ ತೊಡಗಿದ್ದು ತಿಳಿದು ಬರುತ್ತದೆ. ಅವರಲ್ಲಿಯೂ ಬಸವಾದಿಗಳ ಅನುಕರಣೆಗಿಂತ ಹೊರತಾದ ಅತಿಶಯ ಗುಣಗಳು ಅಷ್ಟಾಗಿ ಕಾಣುವುದಿಲ್ಲ.

## 3.6 ವಚನಗಳ ಸಾಮಾನ್ಯ ಲಕ್ಷಣ

ವಚನಕಾರರ ವಚನಗಳನ್ನೆಲ್ಲ ಗಮನಿಸಿದರೆ ಎಲ್ಲರಲ್ಲೂ ಕಂಡುಬರುವ ಕೆಲವು ಸಾಮಾನ್ಯ ಲಕ್ಷಣಗಳಿವೆ. ವಚನಕಾರರೆಲ್ಲರೂ ಶಿವಶರಣರೇ ಆಗಿರುವುದರಿಂದ ಪ್ರತಿಯೊಬ್ಬ ವಚನಕಾರರೂ ತನ್ನ ವಚನದ ಕೊನೆಯಲ್ಲಿ ತನ್ನ ಇಷ್ಟದೇವತೆಯದ ಶಿವನನ್ನು ಸ್ಮರಿಸುತ್ತಾನೆ. ಉದಾ : ಬಸವಣ್ಣನ ಇಷ್ಟದೈವದ ಅಂಕಿತ 'ಕೂಡಲ ಸಂಗಮ ದೇವ', ದೇವರ ದಾಸಿಮ್ಮಯನದು 'ರಾಮನಾಥಾ', ಅಕ್ಕಮಹಾದೇವಿಯದು 'ಚೆನ್ನಮಲ್ಲಿಕಾರ್ಜುನಾ,ಅಲ್ಲಮಪ್ರಭುವಿನದು 'ಗುಹೇಶ್ವರ',ಸಿದ್ಧರಾಮನದು'ಕಪಿಲ ಸಿದ್ಧಮಲ್ಲಿಕಾರ್ಜುನ', ಚೆನ್ನಬಸವಣ್ಣನದು 'ಕೂಡಲ ಚೆನ್ನಸಂಗಮ ದೇವ' ಮೊದಲಾದವು ಮುಂದೆ ವಿವಿಧ ವಚನಕಾರರ ವಚನಗಳನ್ನು ಅಭ್ಯಾಸಮಾಡುವಾಗ ನೀವಿದನ್ನು ಗಮನಿಸಬಹುದು.

## 3.7 ವಚನಗಳ ಭಾಷೆ ಶೈಲಿ

ವಚನ ಪೂರ್ವ ಯೂಗದಲ್ಲಿ ಸಾಹಿತ್ಯಭಾಷೆ ಸಂಸ್ಕೃತ ಭೂಯಿಷ್ಠವಾಗಿತ್ತು. ಪಂಡಿತರ ವಿದ್ವಾಂಸರ ಮೆಚ್ಚಿಗೆಯನ್ನೆ ಗುರಿಯಾಗಿಸಿಗೊಂಡಿತ್ತು. ಅದಕ್ಕೆ ತದ್ವಿರುದ್ಧವಾಗಿ ವಚನ ಸಾಹಿತ್ಯ ಜನರ ಭಾಷೆಯಿಂದ ಜನಸಾಮಾನ್ಯರಿಗಾಗಿ ರಚಿತವಾಯಿತು. ವಚನಗಳ ಭಾವ ಭಾಷೆಗಳಲ್ಲಿ ತುಂಬಿರುವುದು ಕನ್ನಡತನ.

ವಚನಗಳ ಭಾಷೆ ಸರಳ ಸುಂದರ ನಡುಗನ್ನಡ. ಹಳಗನ್ನಡ ಹೊಸಗನ್ನಡವಾಗಿ ರೂಪಾಂತರ ಗೊಳ್ಳುತ್ತಿರುವ ಸಂಧಿಕಾಲದ ಕನ್ನಡ. ಅದರಲ್ಲಿ ಮಾರ್ಗದೇಸಿಗಳ ಸುಂದರ ಸಮನ್ವಯತೆಯನ್ನು ಕಾಣಬಹುದು.

ವಚನ ಸಾಹಿತ್ಯ ನಿರಾಡಂಬರವಾಗಿದ್ದರೂ ಕಿರಿದರಲ್ಲಿ ಹಿರಿದನ್ನು ಹಿಡಿದಿಡುವ ಅತಿಶಯ ಸಾಮರ್ಥ್ಯ ಹೊಂದಿದೆ. ವಚನಗಳ ಸಾರವತ್ತಾದ ಗದ್ಯ ಕನ್ನಡ ಭಾಷೆಗೆ ಕೋಡು ಮೂಡಿಸಿದೆ. ಕನ್ನಡ ಭಾಷೆಯ ಶಕ್ತಿಯನ್ನೂ ಅತಿಶಯ ಸಾಮರ್ಥ್ಯವನ್ನೂ ಮನಗಾಣಬೇಕೆಂದರೆ ನಾವು ವಚನ ಸಾಹಿತ್ಯವನ್ನು ಆಶ್ರಯಿಸಬೇಕಾದುದು ಅನಿವಾರ್ಯವಾಗುತ್ತದೆ. ಕನ್ನಡ ಭಾಷೆ ಜನಸಮ್ಮುಖವಾದ್ದು ವಚನಗಳಿಂದ ಎಂಬುದನ್ನು ಮರೆಯುವಂತಿಲ್ಲ.

ವಚನಗಳ ಪಾದಗಳು ಅನಿಯತವಾದವು. ಮೂರು ನಾಲ್ಕು ಸಾಲುಗಳಿಂದ ಹಿಡಿದು ಮುವ್ವತ್ತು ನಲವತ್ತು ಸಾಲುಗಳನ್ನೂ ಮೀರಿ ನಿಲ್ಲುವಂತಹವು. ಕೆಲವೊಮ್ಮೆ ಪಾದಗಳಾಗಿ ವಿಂಗಡಿಸಬಹುದಾದಷ್ಟು ಛಂದೋಬದ್ಧತೆ ಕಂಡು ಬರುತ್ತದೆ. ಪ್ರಾಸ, ತಾಳ, ಲಯಗಳು ಅಲ್ಲಲ್ಲಿ ಒಡಮಾಡುವುದುಂಟು, ಕಲ್ಪನೆ ಭಾವನೆಗಳಿಗೂ ಕೊರತೆ ಕಂಡು ಬರುವುದಿಲ್ಲ. ಆದರೂ ವಚನಗಳು ಪದ್ಯಗಳಲ್ಲ, ಹಾಡುಗಳಲ್ಲ, ಅದೊಂದು ಕಾವ್ಯಮಯವಾದ ವಿಶಿಷ್ಟ ಗದ್ಯಪ್ರಕಾರ ಎನ್ನಬಹುದು. ತಾಳಲಯಕ್ಕನುಸಾರವಾಗಿ ರಚಿಸಿದವುಗಳಲ್ಲವಾದರೂ ವಚನಗಳನ್ನು ಹಾಡುವ ಪದ್ಧತಿಯೂ ಪ್ರಚಲಿತವಾಗಿದ್ದಂತೆ ಕಂಡು ಬರುತ್ತದೆ.

ನಿಜ ಜೀವನದ ಹೋಲಿಕೆ, ದೃಷ್ಟಾಂತಗಳಿಂದ ಕೂಡಿರುವ ವಚನಸಾಹಿತ್ಯ ಜನಪದ ಸಂಸ್ಕೃತಿಯಿಂದ ಮೊಳೆತ ಸಾಹಿತ್ಯ. ವಸ್ತು, ರೀತಿ, ರಚನೆಗಳೆಲ್ಲದರಲ್ಲಿ ಕನ್ನಡದ ವಿನೂತನ ಪ್ರಕಾರ. ಆಗಿನ ಕಾಲದ ಸಮಾಜದಲ್ಲಿದ್ದ ವಿವಿಧ ಕಾಯಕಗಳ ಪರಿಚಯ ವಚನಗಳಿಂದಾಗುತ್ತದೆ. ಬಡಗಿ, ಕಮ್ಮಾರ, ಚಮ್ಮಾರ, ಮೇದ, ಬಳೆಗಾರ, ಮಡಿವಾಳ, ನೆಯ್ಗೆಯುವ, ತುರುಗಾಹಿ ಈ ಮೊದಲಾದ ಬಗೆಬಗೆಯ

ಕಾಯಕವನ್ನವಲಂಬಿಸಿದ್ದ ವಚನಕಾರರಿಂದ ರಚಿತವಾದ ವಚನಗಳಲ್ಲಿ ಕಾಯಕವನ್ನಾಧರಿಸಿದ ಬೋಧನೆಗಳ ನಿರೂಪಣೆಯನ್ನೂ ಕಾಣಬಹುದು.

ಪರಮಾರ್ಥವನ್ನು ಕಾಯಕಗಳ ದೃಷ್ಟಾಂತದೊಂದಿಗೆ ವಿವರಿಸುವ ಸಹಜ ಸುಂದರ ನಿರೂಪಣೆಗಳಂತೆ ಅಲ್ಲಲ್ಲಿ ನಿರಾಡಂಬರವಾಗಿ ಮಿಂಚುವ ಉಪಮೆ, ರೂಪಕಾಲಂಕಾರಗಳ ಸೊಗಸನ್ನೂ ವಚನಗಳಲ್ಲಿ ನೋಡಬಹುದು. ಅಲ್ಲದೆ ಹಲವಾರು ವಚನಗಳಲ್ಲಿ ಸುಂದರ ಪ್ರತಿಮೆಗಳೂ ಸಾರ್ಥಕ ಶಬ್ದ ಚಿತ್ರಗಳೂ ಪರಿಣಾಮಕಾರಿಯಾಗಿ ಮೂಡಿಬರುತ್ತದೆ.

ಸರಳ ಸುಂದರ ನಿರೂಪಣೆಗಳಿಂದ ಕೂಡಿರುವ ವಚನಗಳಂತೆ ಕೆಲವು ವಚನಗಳು ಗೂಢಾರ್ಥಗಳಿಂದ ತುಂಬಿಕೊಂಡು ರಚಿತವಾಗಿರುವುದನ್ನೂ ಕಾಣಬಹುದು. ಲೌಕಿಕ ವಿವರಣೆಯ ಜೊತೆ ಜೊತೆಯಲ್ಲಿಯೆ ಒಂದು ರೀತಿಯ ಬೆಡಗನ್ನು ಹೊಂದಿರುವ 'ಬೆಡಗಿನ ವಚನ' ಸೃಷ್ಟಿಯಾಯಿತು. ಈ ಬೆಡಗಿನ ವಚನಗಳು ಮೇಲ್ನೋಟಕ್ಕೆ ಕಬ್ಬಿಣದ ಕಡಲೆಗಳೇ ಆದರೂ ಅವುಗಳ ಬೆಡಗನ್ನು ಒಡೆದು ನೋಡಿದಾಗ ಅತ್ಯಂತ ಕಲಾತ್ಮಕ ನಿರೂಪಣೆಗಳಾಗಿರುವುದು ಕಂಡು ಬರುತ್ತದೆ. ಅಲ್ಲಮ ಮುಂತಾದವರು ಈ ಪ್ರಕಾರದ ಅತ್ಯುತ್ತಮ ರಚನೆಗಳನ್ನು ಮಾಡಿ ಇಂತಹ ಒಂದು ಸಂಪ್ರದಾಯಕ್ಕೆ ಕಾರಣ ಕರ್ತರಾಗಿದ್ದಾರೆ. ವಚನಕಾರರು ಏರಿದ್ದ ಬೌದ್ಧಿಕ ಎತ್ತರವನ್ನು ಇಂತಹ ವಚನಗಳಲ್ಲಿ ಮನಗಾಣಬಹುದಾಗಿದೆ.

ಬಹಳಷ್ಟು ವಚನಗಳು ಸಮಾಜದ, ವ್ಯಕ್ತಿಯ ಅಂಕುಡೊಂಕುಗಳನ್ನು ಕುರಿತು ಹೇಳುವಾಗ ವಿಡಂಬನಾತ್ಮಕವಾಗುವುದು ಕಂಡು ಬರುತ್ತದೆ. ವಿಡಂಬನೆ ಅತ್ಯಂತ ಹರಿತವಾಗಿ ಇಂತಹ ಕಡೆ ಪ್ರಯೋಗವಾಗುವುದನ್ನು ಕಾಣಬಹುದು.

ಗಾದೆಗಳು, ಪ್ರತಿಮೆಗಳು, ಶಬ್ದಚಿತ್ರಗಳು, ಚತುರೋಕ್ತಿಗಳು, ನುಡಿಗಟ್ಟುಗಳು, ಕೂಡುನುಡಿಗಳು, ಗೂಢವಿವರಣೆಗಳು, ವಿಡಂಬನೆಗಳು, ತುಂಬಿರುವ ವಚನ ಧಾಟಿ ಸರ್ವರಿಗೂ ಆಕರ್ಷಕವಾಗಿ ನಿಲ್ಲುತ್ತದೆ.

## 3.8 ಸ್ವಪರೀಕ್ಷಾ ಪ್ರಶ್ನೆಗಳು

1. ವಚನ ಸಾಹಿತ್ಯ ಎಂದರೇನು ?

..........................................................................................

..........................................................................................

..........................................................................................

..........................................................................................

..........................................................................................

2. ವಚನ ಸಾಹಿತ್ಯಕ್ಕೆ ಹಿನ್ನೆಲೆಯಾಗಿರುವ ಅಂಶಗಳು ಯಾವುವು?

..........................................................................................

..........................................................................................

..........................................................................................

..........................................................................................

3. ವಚನ ಸಾಹಿತ್ಯ ಯಾವಾಗ ಉಗಮವಾಯಿತು?

..........................................................................................

..........................................................................................

..........................................................................................

4. ವಚನ ಸಾಹಿತ್ಯ ಬೆಳೆದು ಬಂದ ಬಗೆ ಹೇಗೆ?

..........................................................................................

..........................................................................................

..........................................................................................

## 3.9 ಸಾರಾಂಶ

ಈ ಘಟಕದಲ್ಲಿ ವಚನಸಾಹಿತ್ಯಾದ ಹಿನ್ನಲೆ, ಉಗಮ, ಬೆಳವಣಿಗೆ ಸಾಮಾನ್ಯ ಲಕ್ಷಣ ಮುಂತಾದ ಮೂಲಭೂತವಾದ ಸಾಹಿತ್ಯಕ ರೂಪರೇಖೆಯ ವಿಚಾರಗಳನ್ನು ಮನವರಿಕೆ ಮಾಡಿಕೊಂಡಿರಿ. ಈ ಘಟಕದ ವಿಷಯಕ್ಕನುಗುಣವಾಗಿ ಕೆಲವು ಸ್ವಯಂ ಪರೀಕ್ಷಿಸಿಕೊಳ್ಳಲು ಪ್ರಶ್ನೆಗಳು ಮತ್ತು ಅವುಗಳಿಗೆ ತಕ್ಕ ಉತ್ತರಗಳನ್ನು ಮನಗಾಣುವಿರಿ.

## 3.10 ಸ್ವಪರೀಕ್ಷಾ ಪ್ರಶ್ನೆಗಳಿಗೆ ಉತ್ತರಗಳು

1. ವಚನ ಎಂದರೆ ಮಾತು, ನುಡಿ ಎಂದರ್ಥ. ಹನ್ನೆರಡನೆಯ ಶತಮಾನದ ಶಿವಶರಣರ 'ಸೂಳ್ನುಡಿ'ಯೇ (ಸರದಿಯಮಾತು) ಅಥವಾ ಅನುಭಾವದ ಅಂತರಂಗದ ಮಾತುಗಳೇ ವಚನಗಳು. ಅನುಭವ ಹಾಗೂ ಅಭಿವ್ಯಕ್ತಿ ಎರಡರಲ್ಲೂ ಇದು ವಿಶಿಷ್ಟವಾಗಿದೆ. ಪದ್ಯದಲಯ, ಗದ್ಯದಗತ್ತು ಎರಡೂ ಹಿತಮಿತವಾಗಿ ಬೆರೆತು ಸೊಗಸಾಗಿ ಮೂಡಿಬಂದಿರುವ ಕನ್ನಡ ಸಾಹಿತ್ಯದ ವಿಶಿಷ್ಟ ಪ್ರಕಾರ.

2. ಕನ್ನಡ ವಚನ ಸಾಹಿತ್ಯ ರಚನೆಗೆ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಾಕ ಹಿನ್ನೆಲೆಗಳೇ ಮುಖ್ಯ ಅಂಶಗಳಾಗಿರುತ್ತವೆ.

3. ವಚನ ಸಾಹಿತ್ಯ ಯಾವಾಗ ಉದಯವಾಯಿತು ಎಂದು ಖಚಿತವಾಗಿ ಹೇಳಲಾಗದಿದ್ದರೂ ಬಸವಣ್ಣನಿಂದ ಹೊಗಳಲ್ಪಟ್ಟ ಮಾದಾರ ಚೆನ್ನಯ್ಯ, ಡೋಹರಕಕ್ಕಯ್ಯ, ಜೇಡರ ದಾಸಿಮಯ್ಯ ಮುಂತಾದ ಶಿವಶರಣರಿಂದ (ಸು. ೧೧೩೦ರಲ್ಲಿ) ವಚನ ಸಾಹಿತ್ಯ ಆರಂಭವಾಯಿತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

4. ಅಲ್ಲಮ ಪ್ರಭು, ಬಸವಣ್ಣ, ಅಕ್ಕಮಹಾದೇವಿ, ಚೆನ್ನಬಸವಣ್ಣ, ಸಿದ್ಧರಾಮ ಸಕಲೇಶಮಾದರಸ, ಅಂಬಿಗರ ಚೌಡಯ್ಯ, ಮುಕ್ತಾಯಕ್ಕ, ಸೂಳೆಸಂಕವ್ವ, ನೀಲಮ್ಮ, ಸತ್ಯಕ್ಕ ಮೊದಲಾದ ನೂರಾರು ಶಿವಶರಣ -ಶರಣೆಯರು ೧೨ನೇ ಶತಮಾನದ ಉದ್ದಕ್ಕೂ ಸಾಹಿತ್ಯ ಬೆಳವಣಿಗೆಯಲ್ಲಿ ದುಡಿದಿದಾದರೆ.

## ಸಂಚಿಕೆ - 1
## ಕನ್ನಡ ಸಾಹಿತ್ಯ ಚರಿತ್ರೆ - ವಚನ ಸಾಹಿತ್ಯ

---

## ಘಟಕ - 4
## ಪ್ರಮುಖ ವಚನಕಾರರು, ವಚನ ಸಾಹಿತ್ಯದ ಕೊಡುಗೆ

---

ಪರಿವಿಡಿ:

## 4.0 ಘಟಕದ ಉದ್ದೇಶ

ಈ ಘಟಕವನ್ನು ಓದಿದ ಮೇಲೆ ನೀವು ಈ ಕೆಳಕಂಡ ಅಂಶಗಳನ್ನು ಅರಿಯುವಿರಿ.

- ಪಠ್ಯಭಾಗದಲ್ಲಿ ಆದ್ಯ ವಚನಕಾರನಾದ ಜೇಡರ ದಾಸಿಮಯ್ಯನ ವಚನಸಾಹಿತ್ಯವನ್ನು ತಿಳಿಯುವಿರಿ ಪರಿಚಯ ಮತ್ತು ವಚನ ವಿಶ್ಲೇಷಣೆ ಎಂಬ ಎರಡು ಉಪವಿಭಾಗಗಳಲ್ಲಿ ಸಂಕ್ಷಿಪ್ತವಾಗಿ ಚರಿತ್ರೆಯನ್ನು ವಿವರಿಸಲಾಗಿರುವುದನ್ನು ಮನಗಾಣುವಿರಿ. ಇದರಂತೆ ಅಲ್ಲಮಪ್ರಭು, ಬಸವಣ್ಣ ಮತ್ತು ಅಕ್ಕಮಹಾದೇವಿಯರ ಸಾಹಿತ್ಯ ಚರಿತ್ರೆಯನ್ನು ಅರಿಯುವಿರಿ.

## 4.1 ಪೀಠಿಕೆ

ಇದು ಎಂ.ಪಿ.ಪಿ. ಸಿದ್ಧಸಾಮಾಗ್ರಿ. ಇದು 1ನೇ ಸಂಚಿಕೆಯ 4ನೇ ಘಟಕ. ಇದರಲ್ಲಿ ಹನ್ನೆರಡನೇ ಶತಮಾನದ ಪ್ರಮುಖ ಶಿವಶರಣ ವಚನಕಾರರನ್ನು ಪರಿಚಯಿಸಲಾಗಿದೆ ಹಾಗೂ ಆಯುಗದ ವಚನಸಾಹಿತ್ಯದ ವೈಶಿಷ್ಟಗಳನ್ನು ಸಂಕ್ಷಿಪ್ತವಾಗಿ ಅವಲೋಕನ ಮಾಡಲಾಗಿದೆ. ಆ ಕಾಲದ ನೂರಾರು ಶರಣರರೆಲ್ಲರನ್ನು ಪರಿಚಯಸಲಾಗದಿದ್ದರೂ ನೀವು ಈ ಸಾಮಾಗ್ರಿ ಸಹಾಯದಿಂದ ಉಳಿದವರನ್ನು ಪರಿಚಯಿಸಿಕೊಳ್ಳಬಹುದು.

## 4.2 ಪ್ರಮುಖ ವಚನಕಾರರು

### 4.2.1 ಜೇಡರ ದಾಸಿಮಯ್ಯ

ಜೇಡರ ದಾಸಿಮಯ್ಯನ ಕಾಲ ಕ್ರಿ.ಶ. ಸು. ೧೧೪೦ (೧೧೩೫-೧೧೫೦) :ಹನ್ನೆರಡನೆಯ ಶತಮಾನಕ್ಕೆ ಸೇರಿದವನು. ಗುಲ್ಬರ್ಗ ಜಿಲ್ಲೆಯ ಮುದನೂರಿನವನು. ಇವನ ವೃತ್ತಿ ಬಟ್ಟೆ ನೇಯುವುದು. ಇದರಿಂದ 'ಜೇಡರ' ಎಂಬ ವಿಶೇಷಣ ಬಂದಿದೆ. ಜೇಡ-ಜಾಡ ಎಂದರೆ ನೇಯ್ಗೆಯವನು ಎಂದರ್ಥ. ಮುದನೂರಿನ ದೈವನದ ರಾಮನಾಥನ ಭಕ್ತನಾಗಿದ್ದ: ಅದೇ ಹೆಸರನ್ನು ತನ್ನ ವಚನಗಳ ಅಂಕಿತವಾಗಿ ಬಳಿಸಿಕೊಂಡಿದ್ದಾನೆ. ಶಿವ ಭಕ್ತನಾದ ಜೇಡರ ದಾಸಿಮಯ್ಯನು, ಸಮಾಜವು ಹೇರಬಹುದಾದ ಹೆಣ್ಣುನ್ನು ಒಲ್ಲದೆ, ತನ್ನ ಮನೋಭಾವಕ್ಕೆ ಹೊಂದುವ ಹೆಣ್ಣನ್ನು ಹುಡುಕಿಕೊಂಡು ಮದುವೆಯಾದ: ಆಕೆಯೆ ದುಗ್ಗಳೆ. ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂಬ ದಾಸಿಮಯ್ಯನ ಮಾತು ಅವನ ಸಾಂಸಾರಿಕ ತೃಪ್ತಿಯನ್ನು ಹೇಳುತ್ತದೆ. ಜೇಡರ ದಾಸಿಮಯ್ಯ ಮತ್ತು ದೇವರ ದಾಸಿಮಯ್ಯ ಇವರಿಬ್ಬರೂ ಭಿನ್ನರೋ ಅಭಿನ್ನರೋ ಎಂಬ ಪ್ರಶ್ನೆಗೆ ಖಚಿತವಾದ ಉತ್ತರ ಇನ್ನೂ ದೊರತಿಲ್ಲ ಇತ್ತೀಚೆಗೆ ದಾಸಿಮಯ್ಯರಿಬ್ಬರು ಎಂಬು ಅಭಿಪ್ರಾಯವಿದೆ.

ಒಟ್ಟಾರೆ ಜೇಡರದಾಸಿಮಯ್ಯ ಬಸವಣ್ಣನವರ ಹಿರಿಯ ಸಮಕಾಲೀನನೆಂದೂ ಸ್ವೀಕೃತನಾಗಿದ್ದಾನೆ.

ವಚನ ವಿಶ್ಲೇಷಣೆ ಹೇಗೆ? ಜೇಡರ ದಾಸಿಮಯ್ಯ ಒಬ್ಬ ಅದ್ಯ ವಚನಕಾರ. ಅವನ ವಚನಗಳಲ್ಲಿ ಕೆಲವು ಅಚ್ಚ ತ್ರಿಪದಿಗಳೂ ಚೌಪದಿಗಳೂ ಮಿಶ್ರವಾಗಿ ಬರುತ್ತವೆ. ಇನ್ನು ಕೆಲವು ತ್ರಿಪದಿ ಚೌಪದಿಗಳನ್ನೂ ಹೋಲುವ ವಚನೆಗಳೂ, ತ್ರಿಪದಿಯ ಲಯವುಳ್ಳ ವಚನಗಳೂ, ಯಾವುದೇ ಲಯವೂ ಇಲ್ಲದ ಕೇವಲ ವಚನಗಳೂ ಅವನಲ್ಲಿ ಉಂಟು. 'ವಚನ' ಗಳೆಂದೇ ಹಸ್ತಪ್ರತಿಗಳಲ್ಲಿ ದೊರಕುತ್ತವೆ. ಇದನ್ನೆಲ್ಲಿ ನೋಡಿದರೆ, ಬೇರೆ ಬೇರೆ ರಚನೆಗಳಿಗೆ ಕೈಹಾಕಿ ಪ್ರಯತ್ನ ನಡೆಸಿ, ಪ್ರಯೋಗಗಳನ್ನು ಮಾಡಿ, ವಚನ ಪ್ರಕಾರವೊಂದನ್ನು ಅವನು ರೂಪಿಸಿದಂತೆ ಕಂಡುಬರುತ್ತದೆ. ದಾಸಿಮಯ್ಯನ ವಚನಗಳ ಸಂಖ್ಯೆ ಸುಮಾರು ೧೫೦. 'ರಾಮನಾಥಾ' ಎಂಬುದು ವಚನಗಳ ಅಂಕಿತ. ವಿಷಯದ ದೃಷ್ಟಿಯಿಂದ ಅವನ ವಚನಗಳಲ್ಲಿ ತುಂಬ

ವೈವಿಧ್ಯವಿದೆ. 'ಸೂಳ್ನುಡಿ'ಗಳ ಹೆಚ್ಚುಗಾರಿಕೆ, ಶಿವನ ಸ್ವರೂಪ ಮತ್ತು ಮಹಿಮೆ, ಗುರುವಿನ ಹಿರಿಮೆ, ಭಕ್ತರ ಹಿರಿಮೆ, ಸ್ತ್ರೀಯರ ಹಿರಿಮೆ, ಬಾಹ್ಯಾಡಂಬರಗಳ ಖಂಡನೆ, ನೀತಿಬೋಧೆ ಇವೇ ಮುಂತಾದುವು ಅವನ ವಚನಗಳ ಮುಖ್ಯವಸ್ತು.

ಜೇಡರ ದಾಸಿಮಯ್ಯ ಶಿವಶರಣರ ಸೂಳ್ನುಡಿಗಳಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾನೆ. ಕರಿ, ಸಿರಿ ಧರೆಗಳನ್ನೊಳ್ಳದ ದಾಸಿಮಯ್ಯ ಸೂಳ್ನುಡಿಗಳಿಗೆ ಪ್ರತಿಯಾಗಿ ಶಿವನನ್ನೂ ಒಪ್ಪಿಸಲು ಸಿದ್ಧನಿದ್ದಾನೆ, ಅಹಂಕಾರದಿಂದ ಕೊಬ್ಬಿರುವ ಮಾನವ ಶರೀರವನ್ನು ಹತೋಟಿಗೆ ತರಲು 'ಮೃಡ ಶರಣರ ನುಡಿಗಡಣ'ವೆಂಬ ಕಡೆಗೀಲು ಶರೀರವೆಂಬ ಬಂಡಿಗೆ ಬೇಕೇ ಬೇಕು ಎಂದು ಸಮರ್ಥಿಸಿದ್ದಾನೆ. ಶಿವನ ಶಕ್ತಿ ಅಪಾರವಾದುದು. ಅವನು ಜಲಧಿಯ ಮೇಲೆ ಧರೆಯನ್ನು ಕರಗದಂತೆ ಇರಿಸಿದ್ದಾನೆ, ಅಂಬರಕ್ಕೆ ಆಧಾರವಿಲ್ಲದೆಯೆ ನಿಲ್ಲಿಸಿದ್ದಾನೆ. ಅವನೊಬ್ಬ ಮಹಾಕರುಣಾಳು. ಈ ಜಗದ ಸೃಷ್ಟಿ-ಸ್ಥಿತಿಗಳಿಗೆ ಅವನೇ ಕಾರಣ. ಮಾನವನ ಬದುಕಿಗೆ ಬೇಕಾದ ಎಲ್ಲ ವಸ್ತುಗಳನ್ನು ಅವನು ಕರುಣಿಸಿದ್ದಾನೆ. ಇಳೆ-ಬೆಳೆ, ಎತ್ತು-ಬಿತ್ತು, ನೀರು-ಗಾಳಿ, ಕಾಯ-ಜೀವ ಎಲ್ಲವೂ ಅವನ ಕೃಪೆಯಿಂದಲೆ ದೊರಕಿದವುಗಳಾಗಿವೆ. ಘಟದೊಳಗೆ ತೋರುವ ಸೂರ್ಯನಂತೆ ಸರ್ವರಲ್ಲಿಯೂ ಅವನ ಚೈತನ್ಯವೇ ತುಂಬಿದೆ. ಹೀಗೆ ಅವನಿತ್ತ ದಾನವನ್ನು ಅನುಭವಿಸುವ ಮನುಜರು ಅನ್ಯರನ್ನು ಹೊಗಳುವ ಕುನ್ನಿಗಳಾಗಬಾರದು ಎಂಬುದು ಅವನ ನಿಲುವು.

ಗುರು ಕರುಣಿಸಲು ಸಂಸಾರ ವಿಷಯ ಕೆಟ್ಟಿತ್ತು

ಮಾಯಾ ಪ್ರಪಂಚು ಬಿಟ್ಟಿತ್ತು. ಹುಟ್ಟುಬಿತು ಹೋಯಿತ್ತು

ನೆಟ್ಟನೆ ಗುರುಪಾದವ ಮುಟ್ಟಿ ಭವಗೆಟ್ಟನು ಕಾಣಾ ರಾಮನಾಥಾ

ಇಲ್ಲಿ ಸಂಸಾರ ಸಾಗರದಿಂದ ಮೇಲೆತ್ತಿ ಮುಕ್ತಿ ಪಥವನ್ನು ತೋರಿಸುವ ಗುರುವನ್ನು ಕೊಂಡಾಡಿದ್ದಾನೆ; ಹುಟ್ಟು, ಸಾವುಗಳ ಸೆಳತದಿಂದ ಪಾರಾಗಿ ನಿತ್ಯನಿರಂಜನನಲ್ಲಿ ಒಂದಾಗಬಹುದು. ಶಿವನ ಸ್ವರೂಪವನ್ನು ತಿಳಿಸಿಕೊಡಲು ಗುರವೊಬ್ಬನೆ ಸಮರ್ಥ.

ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ

ವಿಷವೇರಿತ್ತಯ್ಯಾ ಅಪಾದಮಸ್ತಕಕ್ಕೆ

ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ

ವಸುಧೆಯೊಳಗಾತನೇ ಗಾರುಡಿಗ ರಾಮನಾಥ

ಹಾವು-ವಿಷ-ಗಾರುಡಿಗರ ಶಬ್ದ ಚಿತ್ರವನ್ನು ನಮ್ಮ ಮುಂದೆ ತಂದು ನಿಲ್ಲಿಸಿ ಪರಿಣಾಮಕಾರಿ ಕಾವ್ಯವಾಗಿಸಿದ್ದಾನೆ: ಹಸಿವಿನ ಅನುಭವವನ್ನು ವಿಷವೇರಿದಕ್ಕೆ ಹೋಲಿಸಲಾಗಿದೆ. ಅನ್ನವೊಂದೇ ಆ ವಿಷಕ್ಕೆ ಮದ್ದು ಎನ್ನುವ ಮಾತೂ ಅಷ್ಟೇ ಮುಖ್ಯ. ಎಲ್ಲದಕ್ಕೂ ಮದ್ದು ಬಲ್ಲಾತನೆ 'ಗಾರುಡಿಗ' , 'ಅರ್ಥಾತ್' ಗುರು

ಒಡಲುಗೊಡವ ಹಸಿವ

ಒಡಲುಗೊಂಡವ ಹುಸಿವ

ಒಡಲುಗೊಂಡವನೆಂದು ನೀನೊಮ್ಮೆ ಜಡಿದು ನುಡಿಯದಿರಾ

ನೀನೆನ್ನಂತೊಮ್ಮೆ ಒಡಲುಗೊಂಡು ನೋಡಾ ರಾಮನಾಥ

ಮನುಷ್ಯ ದೇಹಿ ಹಸಿಯುವುದು ಹುಸಿಯುವುದು ರಕ್ತಕ್ಕೆ ಅಂಟಿ ಬಂದ ಗುಣ: ಅವುಗಳಿಂದ

ಬಿಡುಗಡೆ ಸುಲಭವಲ್ಲ, ಹೀಗಿರುವಾಗ, ದೇವರಿಗೇ ' ನೀನು ನನ್ನ ಹಾಗೆ ಒಂದು ಸಾರಿ ದೇಹಧಾರಣೆ ಮಾಡು, ಆಗ ಗೊತ್ತಾಗುತ್ತದೆ' ಎಂದು ಸವಾಲು ಹಾಕುವ ರೀತಿ ಇಡೀ ವಚನಕ್ಕೆ ಕಾವನ್ನು ತರುತ್ತದೆ.

ಚಪಲ ಚಿತ್ತರೂ ವಿಷಯಲೋಲುಪರೂ ಭಕ್ತರಾಗಲಾರರು. ಕಾರಣಾಂತರದಿಂದ ಅವರು ಭಕ್ತರಾದರೂ ಅದರಿಂದ ಲಾಭವಿಲ್ಲ. ಇದನ್ನು ಕುರಿತ ವಚನವೊಂದು ಹೀಗಿದೆ :

ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ

ಇರುಳೆಲ್ಲ ನಡೆದನಾ ಸುಂಕಕಂಜಿ

ಕಳವೆಯಲ್ಲಾ ಹೋಗಿ ಬರೀ ಗೋಣಿ ಉಳಿಯಿತ್ತು

ಅಳಿಮನದವನ ಭಕ್ತಿ ಇಂತಾಯಿತ್ತು ರಾಮನಾಥ

ಅಳಿಮನದವನು ಹರಿದ ಚೀಲದಲ್ಲಿ ಭಕ್ತಿಯೆಂಬ ಧ್ಯಾನವನ್ನು ತುಂಬಿಕೊಂಡು ನಾನೂ ಭಕ್ತನೆಂದೂ ಬೀಗುತ್ತಾ ನಡೆದರೆ ಅಲ್ಪಕಾಲದಲ್ಲಿಯೇ ಭಕ್ತಿಧಾನ್ಯವೆಲ್ಲವೂ ಕಪಟ, ಅಹಂಕಾರ, ಚಿತ್ತ ಚಾಂಚಲ್ಯ ವಿಷಯಾಸಕ್ತಿಗಳೆಂಬ ರಂಧ್ರಗಳ ಮೂಲಕ ಸೋರಿ ಹೋಗುತ್ತದೆ ಎಂದಿದ್ದಾನೆ.

ಬರುಸೆಟೆಗನ ಭಕ್ತಿ ದಿಟವೆಂದು ನಂಬಲು ಬೇಡ

ಮಠದೊಳಗಣ ಬೆಕ್ಕು ಇಲಿಯ ಕಂಡು

ಪುಟನೆಗೆದಂತಾಯಿತ್ತು ಕಾಣಾ ರಾಮನಾಥ

ಇಲ್ಲಿ ಹರಿತವಾದ ವಿಡಂಬನೆ ಇದೆ. ದಾಸಿಮಯ್ಯನಲ್ಲಿ ಒಮ್ಮೊಮ್ಮೆ ಆವಿಡಂಬನೆ ನಯವಾಗಿರುವುದೂ ಉಂಟು : ಒರಟಾಗಿರುವೂದ ಉಂಟು. ಡಾಂಬಿಕನ ಭಕ್ತಿ ಬರಿಯ ವೇಷದ್ದು, ಕ್ಷಣಿಕವಾದದ್ದು. ಅದನ್ನು ಹೇಳಲು ಮಠದ ಬೆಕ್ಕಿನ ಸಾಮ್ಯವನ್ನು ತೆಗೆದುಕೊಂಡಿರುವುದು ಉಚಿತವಾಗಿದೆ. ಬೆಕ್ಕಿನ ಸಂನ್ಯಾಸ ಕೇವಲ ಹೊಟ್ಟೆಪಾಡಿನದು ಎಂಬ ಅಂಶವನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

### 4.2.2 ಅಲ್ಲಮ ಪ್ರಭು

ಅಲ್ಲಮ ಪ್ರಭು ಅಥವಾ ಪ್ರಭುದೇವನ ಕಾಲ ಕ್ರಿ.ಶ.ಸು.೧೧೬೦ :

ಕಾಲ ಯಾವುದು? ಅಲ್ಲಮ ಪ್ರಭು ಅಥವಾ ಪ್ರಭುದೇವನ ಕಾಲ ಕ್ರಿ.ಶ.ಸು.೧೧೬೦ : ಇಂದು ಒಂದು ಹಳ್ಳಿಯಾಗಿ ಉಳಿದಿರುವ, ಇತಿಹಾಸ ಹನ್ನೆರಡನೆಯ ಶತಮಾನ, ಶಿವಮೊಗ್ಗ ಜಿಲ್ಲೆಯಲ್ಲಿ ಪ್ರಸಿದ್ಧವಾದ ಬಳ್ಳಿಗಾವೆ ಅಲ್ಲಮ ಪ್ರಭುವಿನ ಜನ್ಮಸ್ಥಳ. ತಂದೆ ನಿರಹಂಕಾರ, ತಾಯಿ ಸುಜ್ಞಾನಿ. ಇವು ನಿಜವಾದ ಹೆಸರುಗಳೋ ಅಥವಾ ನಿರಹಂಕಾರ ಸುಜ್ಞಾನಗಳಿಂದ ಮಾತ್ರ ಅಲ್ಲಮ ಪ್ರಭುವಿನಂತಹ ವ್ಯಕ್ತಿತ್ವ ಮೂಡಬಲ್ಲದೆಂಬ ಸಾಂಕೇತಿಕ ಸೂಚನೆಯೋ ತಿಳಿಯದು. ಪ್ರಭುದೇವನ ತಂದೆ ಬಳ್ಳಿಗಾವೆಯಲ್ಲಿ 'ನಾಗವಾಸಾಧಿಪತಿ' ಯಾಗಿದ್ದನೆಂಬ ಮಾತು ಬರುತ್ತದೆ. ಎಂ. ಚಿದಾನಂದಮೂರ್ತಿಯವರು ಶಾಸನಾಧಾರ ಹಾಗೂ ಕಾವ್ಯಧಾರಗಳನ್ನು ಗಮನಿಸಿ, ನಾಗವಾಸಾಧಿಪತಿಯಾಗಿದ್ದ ಅಲ್ಲಮನ ತಂದೆ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆಯ ಗೊಗ್ಗೇಶ್ವರ ದೇವಾಲಯದ ದೇವದಾಸಿಯರ ವರ್ಗದ ಮೇಲ್ವಿಚಾರಕನಾಗಿದ್ದ ಎಂಬ ನಿಲುವಿಗೆ ಬಂದು ತಲುಪಿದ್ದಾರೆ.

ದೇಶ ವಿಚಾರವೇನು? ಬಳ್ಳಿಗಾವೆ, ಕಲ್ಯಾಣದ ಬಿಜ್ಜಳ ಚಕ್ರವರ್ತಿಯ ಕಾಲದಲ್ಲಿ ಮತ್ತು ಅದಕ್ಕಿಂತ ಹಿಂದಿನಿಂದಲೇ ರಾಜಕೀಯವಾಗಿ ಮತ್ತು ಸಂಸ್ಕೃತಿಕವಾಗಿ ಮುಂದುವರೆದಿದ್ದ ಬನವಸೆ ಹನ್ನೆರಡು ಸಾವಿರ ಎಂಬ ಹೆಸರಿನ ನಾಡಿನ ರಾಜಧಾನಿಯಾಗಿತ್ತು. ಇದು ಕಾಳಾಮುಖಿ ಶೈವರ ಪ್ರಸಿದ್ಧ ಮಠವೊಂದರ ಕೇಂದ್ರವೂ ಆಗಿತ್ತು. ತಂದೆಯದು ಬಹುಶಃ ನಟುವ ಜಾತಿ, ಶೂದ್ರಕುಲ. ಕಲಾವಿದರ ಮನೆಯಲ್ಲಿ ಜನಿಸಿದ ಅವಗೆ ಮೃದಂಗವಾದನ ಕಲೆಯಲ್ಲಿ ಸಹಜವಾದ ಅಭಿರುಚಿ ಇದ್ದಿತು. ಒಂದು ದಿನ ಅವನು

ತನ್ನ ಮನೆದೇವರಾದ ಗೊಗ್ಗೇಶ್ವರ ದೇವಾಲಯದಲ್ಲಿ ಮೃದಂಗವನ್ನು ನುಡಿಸುತ್ತಿರುವಾಗ ಅಲ್ಲಿಗೆ ಬಂದಿದ್ದ ಅದೇ ಊರಿನ ಧನದತ್ತನ ಮಗಳು ಕಾಮಲತೆಗೂ ಅವನಿಗೂ ಪ್ರೇಮಹುಟ್ಟಿ ಇಬ್ಬರೂ ಕೆಲವು ಕಾಲ ಗೃಹಸ್ಥ ಜೀವನವನ್ನು ನಡೆಸಿದರು. ಕಾಮಲತೆಯು ಆ ಊರಿನ ವೈಶ್ಯನ ಮಗಳು ಎಂದಿಟ್ಟುಕೊಂಡರೆ, ಅಲ್ಲ ಮತ್ತು ಕಾಮಲತೆಮಯರ ವಿವಾಹಕ್ಕೆ ಸಮಾಜದ ಅನುಮತಿ ದೊರಕಿರಲಾರದು. ಈ ಮಧ್ಯೆ ಅವಳು ಅಸುನೀಗದಳು. ಇದರಿಂದ ತೀವ್ರವಾಗಿ ದುಃಖಿತನಾದ ಅಲ್ಲಮ ಊರ ಹೊರಗಿನ ಕಣಗಿಲೆಯ ತೋಟದಲ್ಲಿ ಏನೂ ತೋಚದೆ ನೆಲವನ್ನು ಕೆರೆಯುತ್ತಿರುವಾಗ, ನೆಲದಲ್ಲಿ ಎಂದೋ ಹೂತುಹೋಗಿದ್ದ ದೇವಾಲಯದ ಶಿಖರವೊಂದು ಕಾಣಿಸಿದು. ಅದನ್ನು ಬಿಡಿಸಿದ ಮೇಲೆ, ಅದರೊಳಗೆ ನುಗ್ಗಿ ಹೋದ ಮೇಲೆ ಅಲ್ಲಮ್ಮನ ಕಣ್ಣಿಗೆ ಕಾಣಿಸಿತು. ಅನುಮಿಷನೆಂಬ ಯೋಗಿಯ ಎಲುಬಿನ ಪಂಜರದಿಂದ ಇಷ್ಟಲಿಂಗ ದೊರಕಿತು. ಕಾಮಲತೆಯ ಸಾವಿನಿಂದ ದಿಕ್ಕು ತಪ್ಪಿದವನಾಗಿದ್ದ ಅಲ್ಲಮ್ಮನಿಗೆ ತನ್ನ ಮುಂದಿನ ಬಾಳಿನ ಗುರಿ ನಿಚ್ಚಳವಾಗಿ ಗೋಚರವಾಯಿತು. ಸಾಧಕನಾಗಬೇಕು, ಮುಕ್ತನಾಗಬೇಕು ಬದುಕಿ, ಸತ್ತರೂ ದೇವರಗಾಗಿಯೇ ಸಾಯಬೇಕು ಎಂದೆನಿಸಿತು. ಇದು ಅವನ ಜೀವನದ ಒಂದನೆಯ ಅಧ್ಯಾಯ.

ಅಲ್ಲಮ ಮುಂದಿನ ಸಾಧನೆಗಳೇನು?ಅಲ್ಲಮ ಮುಂದೆ ಸಾಧಕರ ಉದ್ಧಾರಕ್ಕಾಗಿ ಆತ ಸಂಚಾರವನ್ನು ಕೈಕೊಳ್ಳುತ್ತಾನೆ. ಆತನಡೆದುದೇ ಮಾರ್ಗವಾಗುತ್ತದೆ. ನುಡಿದುದೇ ಮಂತ್ರವಾಗುತ್ತದೆ. 'ಶೂನ್ಯ ಸಂಪಾದನೆ' ಗ್ರಂಥದಲ್ಲಿ ಸಾಧಕರನ್ನು ಎಚ್ಚರಿಸಿ ಮುಂದೆ ಅವರನ್ನು ಕೊಂಡೊಯ್ಯುವ ಆತನ ಅದ್ಭುತ ತಪಶಕ್ತಿಯನ್ನು ಚಿತ್ರಿಸಲಾಗಿದೆ. ಅಣ್ಣನನ್ನು ಕಳೆದುಕೊಂಡು ಗೋಳಾಡುತ್ತಿರುವ ಮುಕ್ತಾಯಕ್ಕನನ್ನು ಎಚ್ಚಾರಿಸಿ ಸಿದ್ಧರಾಮನನ್ನು ಶಿವಯೋಗಿಯನ್ನಾಗಿ ಮಾಡಿದ. ಹಠಯೋಗದ ಸಿದ್ಧಿಗಳೇ ಸರ್ವಸ್ವವೆಂಬ ಭ್ರಮೆಗೆ ಒಳಗಾದ ಗೋರಕ್ಷನ್ನು ಎಚ್ಚರಿಸಿದ ಇವರು ಕೆಲವರು ಮಾತ್ರ. ಸೊನ್ನಲಾಪುರದಿಂದ ಸಿದ್ಧರಾಮನನ್ನು ಒಡಗೊಂಡು ಅಲ್ಲಮ್ಮ ಪ್ರಭು ಕಲ್ಯಾಣಕ್ಕೆ ಬಂದಂತೆ ತಿಳಿದುಬರುತ್ತದೆ. ಅಲ್ಲಮ ಪ್ರಭು ಕಲ್ಯಾಣದಲ್ಲಿ ಕೆಲವುಕಾಲನಿಂತು ಅನುಭವ ಮಂಟಪದ ಅಗ್ರ ಪೀಠವನ್ನು ವಹಿಸಿದುದು ಅಲ್ಲಿ ನಡೆಯುತ್ತಿದ್ದ ಅನುಭಾವ ಗೋಷ್ಠಿಗಳಿಗೆ ಹೊಸ ಚೈತನ್ಯವನ್ನು ತಂದುಕೊಟ್ಟಿತು. ಪ್ರಮುಖ ಸಾಮಾಜಿಕ ಸಮಸ್ಯೆಗಳಿಂದ ಹಿಡಿದು ವ್ಯಕ್ತಿಯ ಅಂತರಂಗಕ್ಕೆ ಸಂಬಂಧಿಸಿದ ಅನುಭವದವರೆಗೂ ಇರುವ ಬಹುಮುಖ ವಿಷಯಗಳ ಮಂಥನ ಅಲ್ಲಿ ನಡೆಯುತ್ತಿತ್ತು. ದೇಶದ ಎಲ್ಲ ಭಾಗಗಳಿಂದಲೂ ಮತ್ತು ಜೀವನದ ಎಲ್ಲ ರಂಗಗಳಿಂದಲೂ ಬಂದು ಆಧ್ಯಾತ್ಮಸಾಧನೆಯಲ್ಲಿ ಸೇರಿದ ಅನುಭಾವಿಗಳ ಗೋಷ್ಠಿಗೆ ಅಲ್ಲಮ ಪ್ರಭುವಿನಂತಹ ಮಹಾ ಅನುಭಾವಿಯ ಮಾರ್ಗದರ್ಶಕ ಶಕ್ತಿ ದೊರೆತದು ಬಸವಣ್ಣನವರ ಹಾರೈಕೆಯ ಫಲ : ಶರಣರ ಪುಣ್ಯದ ಬಲ. ಈ ಕರ್ತವ್ಯವನ್ನು ನಿರ್ವಹಿಸಿದ ಮೇಲೆ ಸಹಜ ಜಂಗಮನಾದ ಅಲ್ಲಮ ಪ್ರಭು ಮತ್ತೆ ಸಂಚಾರವನ್ನು ಕೈಕೊಳ್ಳಲು ನಿರ್ಧರಿಸುತ್ತಾನೆ. ಸಿದ್ಧ ವೀರಣ್ಣೊಡೆಯ 'ಶೂನ್ಯ ಸಂಪಾದನೆ'ಯಲ್ಲಿ ಇಡೀ ಭಾರತದ ಸಂಚಾರವನ್ನು ಕೈಕೊಂಡನೆಂದು ಹೇಳಿ ಆಯಾ ಸ್ಥಳಗಳನೆಲ್ಲ ಹೆಸರಿಸಿದ್ದಾನೆ. ಅವನ ಆಶ್ವಾಸನೆಯಂತೆ, ಮತ್ತೆ ಕಲ್ಯಾಣಾಭಿಮುಖನಾಗುತ್ತಾನೆ. ಬಸವಣ್ಣನವರು ಸಂಭ್ರಮದಿಂದ ಸ್ವಾಗತಿಸಿ, ಆತನಿಗಾಗಿ ನಿರ್ಮಿಸಿದ್ದ ಶೂನ್ಯ ಸಿಂಹಾಸನಾದ ಮೇಲೆ ಕುಳ್ಳಿರುಸುತ್ತಾರೆ. ಅಲ್ಲಮ ಪ್ರಭು ಸಿಂಹಾಸನವನ್ನೇರಿ ಅನುಭವಮಂಟಪದ ಕೇಂದ್ರ ಸ್ಥಾನವನ್ನು ವಹಿಸಿಕೊಂಡುದು ಶರಣರಿಗೆ ಹೊಸ ಉತ್ಸಾಹವನ್ನು ತಂದಿತು. ಬಸವಣ್ಣನವರ ಕಾರ್ಯಕ್ಷೇತ್ರ ವ್ಯಾಪಕವಾಗಿ ಬೆಳೆಯಿತು. ಜಾತಿ ಮತಗಳನ್ನು ಅಳಿಸಿದ ಸರ್ವಸಮಾನತೆಯನ್ನು ದಿಟ್ಟತನದಿಂದ ಸಾಧಿಸಿತು. ಆದರೆ ಅಂತ್ಯಜನಾಗಿದ್ದ ಹರಳಯ್ಯ ಬ್ರಾಹ್ಮಣನಾಗಿದ್ದ ಮಧುವರಸನಲ್ಲಿ ಬಾಂಧವ್ಯವನ್ನು ಬೆಳೆಸುವ ಮಟ್ಟಕ್ಕೆ ಅದು ಹೋದಾಗ ಅಂದಿನ ಸಮಾಜ ಅರಗಿಸಿಕೊಳ್ಳಲಾರದೇ ಹೋಯಿತು. ಕಲ್ಯಾಣದಲ್ಲಿ ದೊಡ್ಡ ಕ್ರಾಂತಿಯಾಯಿತು. ಅದರ ಫಲವಾಗಿ ಶರಣರೆಲ್ಲಾ ಚೆದುರಬೇಕಾಯಿತು. ಪ್ರಭುದೇವ ಶ್ರೀ ಶೈಲದತ್ತ ಹೊರಡುತ್ತಾನೆ. ಅಲ್ಲಿಯ ಕದಳಿಯ ವನದಲ್ಲಿ ಲಿಂಗಾಂಗ ಸಾಮರಸ್ಯದ ಕೊನೆಯ ನಿಲುವನ್ನು ಪಡೆಯುತ್ತಾನೆ.

ಅಲ್ಲಮನ ವಚನಗಳ ಸಂಖ್ಯೆ ಖಚಿತವಾಗಿ ಇಂತಿಷ್ಟು ಎಂದು ನಿರ್ಧಾರವಾಗಿಲ್ಲ; 'ಅಲ್ಲಮನ ವಚನ ಚಂದ್ರಿಕೆಯಲ್ಲಿ ಅಧಿಕವಚನಗಳು ಸೇರಿದಂತೆ ೧೫೫೬ ವಚನಗಳಿದ್ದರೆ, 'ಅಲ್ಲಮನ ವಚನಗಳಲ್ಲಿ

ಅಧಿಕ ವಚನಗಳ ಸೇರ್ಪಡೆಯಿಂದ ೫೦೪ ಇವೆ. ಅಲ್ಲಮನೇ ಒಂದೆಡೆ 'ಎರಡೆಂಬತ್ತು ಕೋಟಿ ವಚನವ ಹಾಡಿ ಹಲವ ಹಂಬಲಿಸಿತ್ತೆನ್ನ ಮನವು' ಎಂದಿರುವುದುಂಟು. ಅವನ ವಚನಗಳ ಅಂಕಿತ 'ಗುಹೇಶ್ವರ' ಎಂದೇ ಸಾಮಾನ್ಯವಾಗಿ ತಿಳಿಯಲಾಗಿದೆ. 'ಗುಹೇಶ್ವರ', 'ಗೊಹೇಶ್ವರ', 'ಗೋಹೇಶ್ವರ', 'ಗುಹ್ಯೇಶ್ವರ', 'ಗೋಗೇಶ್ವರ' ಎಂದು ವಿವಿಧ ಪಾಠಾಂತರಗಳೊಡನೆ ಆತನ ಅಂಕಿತವಿರುವುದು ಹಸ್ತ ಪ್ರತಿಗಳಲ್ಲಿ ಕಂಡುಬರುತ್ತದೆ. 'ಗುಹೇಶ್ವರ', 'ಗೋಗೇಶ್ವರ'ಎಂಬುವು ಅಂಕಿತಗಳಲ್ಲಿ ಮುಖ್ಯವಾದುವು ಎಂದು ಎಂ. ಚಿದಾನಂದಮೂರ್ತಿಗಳು ಹೇಳುತ್ತಾರೆ. 'ಗುಹೇಶ್ವರ' ಎಂಬುದೇ ಹೆಚ್ಚು ಪ್ರಚಲಿತವಾಗಿದ್ದು, ಅದನ್ನೇ ಇಲ್ಲಿಯೂ ಅನುಸರಿಸಲಾಗಿದೆ.

ನಿಮ್ಮ ತೇಜವ ನೋಡಲೆಂದು ಸಂಚವ ಕಂಡೆ ಸಾರಿ ನೋಡುತ್ತಿರಲು ಹೆಱ ಮೂಡಿದಂತೆರ್ದುದಯ್ಯ

ಶತಕೋಟಿ ಸೂರ್ಯರು

ಮಿಂಚಿನ ಬಳ್ಳಿಯ ಸಂಭವಕಂಡೆ

ಅಲ್ಲಮನಿಗೆ ಇಷ್ಟಲಿಂಗ ಕೈಗೆ ಬಂದಕ್ಷಣ ಆಡಿದನೆಂದು ಶೂನ್ಯ ಸಂಪಾದನೆ ಕಲ್ಪಿಸುವ ಪ್ರಸಂಗ ಹಿನ್ನೆಲೆಯ ಒಂದು ವಚನ ಹೀಗಿದೆ.

ಎತ್ತಣ ಮಾಮರ! ಎತ್ತಣ ಕೋಗಿಲೆ!

ಎತ್ತಣೆಂದೆತ್ತ ಸಂಬಂಧವಯ್ಯ !

ಬೆಟ್ಟದ ನೆಲ್ಲಿಯಕಾಯಿ, ಸಮುದ್ರದೊಳಗಣ ಉಪ್ಪು,

ಎತ್ತಣಿಣೆಂದೆತ್ತ ಸಂಬಂಧವಯ್ಯ!ಗುಹೇಶ್ವರ ಲಿಂಗಕ್ಕೆಯೂ ಎನಗೆಯೂ

ಎತ್ತಣೆಂದೆತ್ತ ಸಂಬಂಧವಯ್ಯ!

ಇಲ್ಲಿನ ವಿಸ್ಮಯ ಎದ್ದು ಕಾಣುವಂತಹುದು. ಸಾಮಾನ್ಯನಾದ ತಾನು ಎಲ್ಲಿ? ತಾನು ಕನಸಿನಲ್ಲಿಯೂ ಪಡೆಯಲು ಸಾಧ್ಯವಾಗದ ಇಷ್ಟಲಿಂಗ ಪ್ರಾಪ್ತಿ ಎಲ್ಲಿ? ಎರಡಕ್ಕೂ ಅರ್ಥಾತ್ ತಾರ್ಕಿಕ ಸಂಬಂಧವಿಲ್ಲ. ಇದು ಧಾರ್ಮಿಕ ವ್ಯವಸ್ಥೆಯಲ್ಲಿಯಂತೂ ಅಸಂಭವ, ಅತಾರ್ಕಿಕ ಆದರೆ ಭಗವಂತನೇ ನಿರ್ಮಿಸಿದ ನಿಸರ್ಗದಲ್ಲಿಯಂತೂ ಇಂಥ ಘಟನೆಗಳು ಕಣ್ಣ ಮುಂದೆಯೇ ನಡೆಯುತ್ತವೆ. ಮಾವಿನ ಮರವನ್ನು ಹುಡುಕಿಕೊಂಡು ಕೋಗಿಲೆ ಬರುತ್ತದೆ. ಎರಡಕ್ಕೂ ಸಂಬಂಧವಿಲ್ಲ. ಆದರೆ ಸಂಬಂಧವುಂಟಾಗಿ ಕೋಗಿಲೆಯಿಂದ ಮಾವಿನಮರ ಗೌರವವನ್ನು ಪಡೆದುಕೊಳ್ಳುತ್ತದೆ. ಬೆಟ್ಟದ ನೆಲ್ಲಿಕಾಯಿ ದೂರದ ಕಡಲಿನ ಉಪ್ಪು-ಎರಡೂ ಸೇರಿ ಹದವಾದ ರುಚಿ ಕೊಡುತ್ತವೆ. ಈ ಎರಡೂ ಒಂದಕ್ಕೊಂದು ಪೂರಕವೆನ್ನುವಂತೆ ಸೃಷ್ಟಿಯಾಗಿರುವುದು ಕಾಣುತ್ತದೆ. ಹೀಗಿರುವಾಗ ಅಲ್ಲಮನಿಗೂ ಗುಹೇಶ್ವರ ಲಿಂಗಕ್ಕೂ ಅರ್ಥಾತ್ ಶಿವನಿಗೂ ಸಂಬಂಧ ಬಂದಿರುವುದು ಆ ವಿಸ್ಮಯಗಳ ಮಾಲಿಕೆಗೇ ಸೇರುತ್ತದೆ. ಅವನ ವಚನಗಳು ಆಲೋಚನೆಯಿಂದ ತುಂಬಿಕೊಂಡು ಓದುಗರನ್ನು ಒಂದುಕ್ಷಣ ಅಂತರ್ಮುಖಿಗಳನ್ನಾಗಿ ಮಾಡುತ್ತವೆ. ತನ್ನ ವಿಚಾರವನ್ನು ಎಷ್ಟು ಸಂಕ್ಷಿಪ್ತವಾಗಿ ಹಿಡಿದಿಡಬಲ್ಲನೆಂಬುದಕ್ಕೆ ಕೆಳಗಿನ ವಚನ ಒಳ್ಳೆಯ ಉದಾಹರಣೆ!

ಆಸೆಗೆ ಸತ್ತುದು ಕೋಟಿ

ಆಮಿಷಕ್ಕೆ ಸತ್ತುದು ಕೋಟಿ

ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ

ಗುಹೇಶ್ವರಾ ನಿಮಗಾಗಿ ಸತ್ತವರನಾರನೂ ಕಾಣೆ.

'ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ' ಎಂದು ಲೌಕಿಕ ಸುಖದ ಬೆನ್ನು ಹತ್ತಿದವರನ್ನು ಎಚ್ಚರಿಸುತ್ತಾನೆ. 'ಹೊನ್ನು ಹೆಣ್ಣು ಮಣ್ಣು ಮಾಯೆಯಲ್ಲ ಮನದ ಮುಂದಣ ಆಶೆಯೇ ಮಾಯೆ ಕಾಣಾ' ಎಂದು ಮಾಯೆಯ ಸ್ವರೂಪವನ್ನು ಹೇಳುವಲ್ಲಿ ಪ್ರಭುವಿನ ಮಾತುಗಳ ಪ್ರಭೆ ಹೊಳೆಯುತ್ತದೆ. ಇಂತಹ ಅನೇಕ ವಚನಗಳು ಆತನ ಕಾವ್ಯಶಕ್ತಿಗೆ ಸಾಕ್ಷಿಯಾಗಿವೆ. ಹೀಗೆ ಆತನ ವಚನಗಳು ಅಂತರಾಳದ ಅನುಭವದಿಂದ ನೇರವಾದ ಮಾತುಗಳಲ್ಲಿ ಮೂಡಿ ಬಂದಿವೆ. ಅವನ ವಿಶಿಷ್ಟ ವ್ಯಕ್ತಿತ್ವನ್ನು ಅರಿಯಲು ಸಾಹಿತ್ಯ ವಿದ್ಯಾರ್ಥಿಗೆ ಅಮೂಲ್ಯ ಗಣಿಯಂತಿವೆ.

ಬೆಡಗಿನ ವಚನಗಳ ಸ್ವರೂಪವೇನು? ಬೆಡಗಿನ ವಚನಗಳ ಪ್ರಭುದೇವನ ಮತ್ತೊಂದು ಬಗೆಯ ವಿಶಿಷ್ಟವಾದ ಯಶಸ್ವಿಪ್ರಯೋಗ : ಹೇಳಬೇಕಾದುದನ್ನು ನೇರವಾಗಿ ಹೇಳದೆ, ಒಂದು ಒಗಟಿನ ರೂಪದಲ್ಲಿ ಅಥವಾ ಒಂದು ಸಮಸ್ಯೆಯ ರೀತಿಯಲ್ಲಿ ಹೇಳುವುದು ಬೆಡಗು. ಇದು ಶ್ಲೇಷೆಯಿಂದ ಸಾಧಿಸುವ ಚಮತ್ಕಾರವಲ್ಲ. ಪದದ ತೋರಿಕೆಯ ಅರ್ಥ ಒಂದಾದರೆ ಅದು ವಚನದಲ್ಲಿ ಪ್ರತಿನಿಧಿಸುವ ಅರ್ಥವೇ ಇನ್ನೊಂದು :ಅದರಿಂದ ಉಂಟಾಗುವ ಅನುಭವವೇ ಬೇರೊಂದು. ಯಾವುದನ್ನು ಹಲವಾರು ಮಾತುಗಳಲ್ಲಿ ಬಿಚ್ಚಿ ಹೇಳಬಹುದಿತ್ತೋ ಅದನ್ನು ಕಡಮೆ ಮಾತುಗಳಲ್ಲಿ ಮುಚ್ಚಿ ಹೇಳುವುದು ಬೆಡಗಿನ ವಚನಗಳ ವೈಶಿಷ್ಟ್ಯ. ಹೀಗೆ ಮುಚ್ಚಿ ಹೇಳವಲ್ಲಿ ಮೂಲತಃ ಯಾವ ಉದ್ದೇಶವಿತ್ತೋ ತಿಳಿಯದು. ಒಂದು ನಿರ್ದಿಷ್ಟಯೋಗಮಾರ್ಗದಲ್ಲಿ ಉಪದೇಶ ಪಡೆದ ಅಧಿಕಾರಿಯಾದ ವ್ಯಕ್ತಿಗೆ ಮಾತ್ರ ಅಧ್ಯಾತ್ಮವಿದ್ಯೆ ತಿಳಿಯಬೇಕೆಂದೂ, ಒಂದು ವೇಳೆ ಆ ವಿದ್ಯೆ ಅನಧಿಕಾರಿಯ ಕೈಗೆ ಹೋದರೂ ಅದು ಅವನಿಗೆ ಅರ್ಥವಾಗದೇ ಹೋಗುವುದರಿಂದ ಅಪಾಯವಿರುವುದಿಲ್ಲವೆಂದೂ ಭಾವಿಸಿ ಇಂತಹ ಗೂಢಭಾಷೆಯನ್ನು ತಂತ್ರಶಾಸ್ತ್ರಜ್ಞರು ಬಳಸಿರಬೇಕು. ಅದರ ಪರಿಭಾಷೆಯನ್ನು ತಿಳಿದವರಿಗೆ ಸರಿಯಾದ ಅರ್ಥವನ್ನು ಕೊಡುತ್ತದೆ. ವೀರಶೈವ ಅಂದೋಲನವು ಸಾಮಾನ್ಯರಿಗೆ ನಡೆದದ್ದಾದ್ದರಿಂದ ಹೀಗೆ ಅಧಿಕಾರಿ-ಅನಧಿಕಾರಿ ಎಂಬ ಭೇದವನ್ನು ಮಾಡಿದ್ದು ಸರಿಯೇ ಎಂಬ ಪ್ರಶ್ನೆ ನಮ್ಮನ್ನು ಬಾಧಿಸಬಹುದು. ಅಲ್ಲಮ ತಂತ್ರಶಾಸ್ತ್ರದಲ್ಲಿ ನೈಪುಣ್ಯ ಪಡೆದಿದ್ದರಿಂದ ಆ ಶೈಲಿಯನ್ನು ಕನ್ನಡಕ್ಕೂ ತಂದರು. ಬೆಡಗಿನ ವಚನಗಳಲ್ಲಿ ಸಿದ್ಧ ಸಂಕೇತಗಳು ಬಳಕೆಯಾಗುತ್ತವೆ. ಹಂಸ = ಆತ್ಮ, ಕಾಡು = ಸಂಸಾರ, ಅಗ್ನಿ = ಜ್ಞಾನ, ನೀರು = ಚಂಚಲ ಮನಸ್ಸು ಇತ್ಯಾದಿ. ಒಂದು ಸಂಕೇತ ಕೆಲವೊಮ್ಮೆ ಒಂದಕ್ಕಿಂತ ಹೆಚ್ಚಿನ ಅರ್ಥಗಳಲ್ಲಿ ಬಳಕೆಯಾಗಬಹುದು.

ಐದು ಸರ್ಪಂಗಳಿಗೆ ತನು ಒಂದು ದಂತವೆರಡು

ಸರ್ಪ ಕಡಿದು ಸತ್ತ ಹೆಣ ಸುಳಿದಾಡುವುದು ಕಂಡೆ

ಈ ನಿತ್ಯಜಿನಯದ ಠಾವಿನಲ್ಲಿ ಭಕ್ತಿಯಲ್ಲಿಯದೊ ಗುಹೇಶ್ವರ

ಇದು ಮೇಲ್ನೋಟಕ್ಕೆ ಅಸಂಬದ್ಧಗಳ ಕಂತೆ. ಆದರೆ ಒಂದು ವಿಶಿಷ್ಟ ಪದಗಳನ್ನು ಸಂಕೇತವಾಗಿ ನಿಲ್ಲಿಸಿದ್ದಾನೆ. ಇಲ್ಲಿ ಐದು ಸರ್ಪ ಎಂದರೆ ಪಂಚೇಂದ್ರಿಯಗಳು. ತನು ಎಂದರೆ ಮನಸ್ಸು :ದಂತವೆಂದರೆ ಸಂಕಲ್ಪವಿಕಲ್ಪಗಳು. ಇವುಗಳಿಂದ ಕಡಿಸಿಕೊಂಡು, 'ಸತ್ತಹೇಣ' ಎಂದರೆ ಅಜ್ಞಾನಿ ಜೀವ ತೊಳಲಾಡುತ್ತದೆ. ಪರವಸ್ತುವನ್ನರಿತಾಗ ವಿಷ ಮುಕ್ತವಾಗುತ್ತದೆಂದು ವಚನವನ್ನು ಮುಕ್ತಾಯಗೊಳಿಸುತ್ತಾನೆ.

ಹುಲಿಯ ತಲೆಯ ಹುಲ್ಲೆ ಹುಲ್ಲೆಯ ತಲೆಯ ಹುಲಿ

ಈ ಎರಡಱ ನಡು ಒಂದಾಯಿತು

ಹುಲಿಯಲ್ಲ ಹುಲ್ಲೆಯಲ್ಲ ಕೆಲದಲೊಂದು ಬಂದು

ಮೆಲುಕಾಡಿತ್ತು ನೋಡಾ

ತಲೆಯಿಲ್ಲದ ಮುಂಡ ತಱಗೆಲೆಯ ಮೇದರ

ಎಲೆ ಮಱೆಯಾಯಿತ್ತು ಗುಹೇಶ್ವರ

ಇದು ಸ್ವಲ್ಪ ವಿಚಿತ್ರವಾಗಿದೆ. ಆದರೆ ಸುಂದರವಾದ ಅರ್ಥವನ್ನು ಒಳಗೊಂಡಿದೆ. ಹುಲಿಯ ತಲೆಯನ್ನುಳ್ಳ ಹುಲ್ಲೆ, ಮತ್ತು ಹುಲ್ಲೆಯ ತಲೆಯನ್ನುಳ್ಳ ಹುಲಿ -ಇವೆರಡರ ನಡುವೂ ಸೇರಿ ಒಂದಾಗಿ ಒಂದು ವಿಚಿತ್ರ ಪ್ರಾಣಿಯಾಗಿದೆ. 'ಕಾಲ' ಮತ್ತು 'ಮಾಯೆ' ಗಳೆರಡೂ ಸೇರಿ ಆಗಿರುವ ಪ್ರಾಣಿಯಿದು ಇದು ಮುರಿದು ತಿನ್ನುವ ಹುಲಿಯೂ ಅಲ್ಲ, ಮೋಹಿಸಿ ನುಂಗುವ ಹುಲ್ಲೆಯೂ ಅಲ್ಲ. ಈ ಕರ್ಮವೆಂಬ ಪ್ರಾಣಿಯ ಪ್ರಭಾವ ಎರಡರ ನಡುವಿನ ಸ್ಥಿತಿಯಲ್ಲಿಯೇ ಇರುತ್ತದೆ. ಇದು ತೀರ ಸಮೀಪಕ್ಕೆ ಬಂದು, ಆದರೂ ಮರೆಯಲ್ಲಿ ನಿಂತು, ಮೆಲುಕ ಹಾಕಿ ಜೀವಿಯನ್ನು ಹಿಡಿಯುತ್ತದೆ. ಇದು ಜ್ಞಾನವೆಂಬ ತಲೆಯನ್ನು ಕಳೆದುಕೊಂಡಿದೆ, ತಲೆಯಿಲ್ಲದ ಮುಂಡವಾಗಿದೆ. 'ಅಜ್ಞಾನಿ'ಯೆಂಬ ತರಗೆಲೆಯನ್ನು ಮೇಯುತ್ತದೆ. ವಿಷಯ ಸುಖದ ಬೆನ್ನು ಹತ್ತಿದ ಅಜ್ಞಾನಿ ಜೀವ ಸಂಕಟದಲ್ಲಿ ಬೆಂದು ತರಗೆಲೆಯಾಗುತ್ತದೆ. ಭಕ್ತಿರಸ ಸಾಗಿಸಲಾದ ಜೀವವು ತುಂಬಿ ನಿಂತಿರುವ ಹಸುರಲೆಯಂತೆ ಕಳಕಳಿಸಿ ನಗುತ್ತದೆ. ಇಂತಹ ಕಲ್ಪನಾ ಪ್ರತಿಭೆಯಿಂದ ಅಪೂರ್ವವಾದ ಕಾವ್ಯ ಪ್ರತಿಮೆಗಳನ್ನು ನಿರ್ಮಿಸಲು ಪ್ರಭು ಸಮರ್ಥನಾಗಿದ್ದಾನೆ. ಇಲ್ಲಿ ಕಾಣುವ ಭಾವನಾವಿಲಾಸ, ಸಾಂಕೇತಿಕತೆ, ನಿಗೂಢ ತತ್ತ್ವ ಪ್ರತಿಪಾದನೆ, ಅರ್ಥಪೂರ್ಣ ಧ್ವನಿಶಕ್ತಿ ಇವು ಸಾಹಿತ್ಯ ಪ್ರಪಂಚದಲ್ಲಿ ವಿಶಿಷ್ಟವಾದುವು.

### 4.2.3 ಬಸವಣ್ಣ

ಬಸವಣ್ಣನವರ ಕಾಲ ಕ್ರಿ.ಶ.ಸು. ೧೧೬೦ : ಅಂದರೆ ಹನ್ನೆರಡನೆಯ ಶತಮಾನದ ಉತ್ತರಾರ್ಧ. ಬಸವಣ್ಣನವರ ಕಾಲ ಮತ್ತು ಜೀವನದ ವಿವರಗಳಲ್ಲಿ ಏಕಾಭಿಪ್ರಾಯವಿಲ್ಲ. ವಿದ್ವಾಂಸರಲ್ಲಿ ವಿಪುಲವಾಗಿ ಚರ್ಚೆ ನಡೆದಿದೆ :ಅವರ ಅಭಿಪ್ರಾಯ ಸಾರವನ್ನೂ ಮಾತ್ರ ಇಲ್ಲಿ ಕೊಡಲಾಗಿದೆ. ಬಸವಣ್ಣ ಹುಟ್ಟಿದ್ದು ಬಿಜಾಪುರ ಜಿಲ್ಲೆಯ ಇಂಗಳೇಶ್ವರ ಬಾಗೇವಾಡಿ ಎಂಬ ಅಗ್ರಹಾರದಲ್ಲಿ. ಆ ಕಾಲದ ಪ್ರಸಿದ್ಧ ಅಗ್ರಹಾರಗಳಲ್ಲಿ ಒಂದು : ಅದು ವಿದ್ವಾಂಸರ ನೆಲೆವೀಡಾಗಿದ್ದಿತು. ಆ ಅಗ್ರಹಾರದ ಮುಖ್ಯಸ್ಥನಾಗಿದ್ದ ಶೈವ ಬ್ರಾಹ್ಮಣ ಮಾದಿರಾಜ (ಮಾದರಸ) ಅವನ ತಂದೆ. ಮಾದಲಾಂಬೆ (ಮಾದಾಂಬೆ) ಅವನ ತಾಯಿ. ಅಗ್ರಹಾರದ ವೈದಿಕ ಸಂಪ್ರದಾಯದಲ್ಲಿ ಬೆಳೆದ ಬಾಲಕ ಬಸವಣ್ಣ ಕರ್ಮನಿಷ್ಠ ಬ್ರಾಹ್ಮಣ್ಯಕ್ಕಿಂತ ಭಕ್ತಿಮಾರ್ಗವು ಪ್ರಿಯವಾಯಿತು. ಭಕ್ತಿಮಾರ್ಗವು ಜಾತಿ ಕುಲ ಭೇದಗಳನ್ನು ಮನ್ನಿಸುವುದಿಲ್ಲ. ತಂದೆಯ ಬಲವಂತಕ್ಕೆ ಎಂಟನೆಯ ವಯಸ್ಸಿನಲ್ಲಿ ಬಸವಣ್ಣನಿಗೆ ಉಪನಯನವಾಯಿತು. ತಂದೆ ತಾಯಿಗಳು ಮಡಿಯುತ್ತಲೇ ತನ್ನ ಹದಿನಾರನೆಯ ವಯಸ್ಸಿನಲ್ಲಿ ಜನಿವಾರವನ್ನು ಕಿತ್ತೆಸೆದು ಬ್ರಾಹ್ಮಣ ಸಮಾಜದಿಂದ ಹೊರಬಂದ. ಅದೇ ಊರಿನ ಶೈವ ಸಮಾಜ ಉತ್ಸಾಹದಿಂದ ಅವನನ್ನು ಬರಮಾಡಿಕೊಂಡಿತು. ಆ ಊರಿನಲ್ಲಿ ಬಹಳ ಕಾಲ ಇರಲಾಗಲಿಲ್ಲ. ಕೃಷ್ಣ ಮತ್ತು ಮಲಪ್ರಭಾ ನದಿಗಳ ಸಂಗಮಸ್ಥಾನವಾದ ಈ ಸ್ಥಳ ಕಪ್ಪಡಿ ಸಂಗಮವೆಂದು ಆಗ ಪ್ರಸಿದ್ಧವಾಗಿತ್ತು. ಪ್ರಾಚೀನ ಕರ್ನಾಟಕದ ಪ್ರಮುಖ ವಿದ್ಯಾಕೇಂದ್ರಗಳಲ್ಲಿ ಅಗ್ರಮಾನ್ಯವಾಗಿತ್ತು. ಬಸವಣ್ಣ ಇಲ್ಲಿಗೆ ಬಂದ ಕೂಡಲಸಂಗಮದ ಸ್ಥಾನಪತಿಗಳಾದ ಈಶಾನ್ಯ ಗುರುಗಳ ಹತ್ತಿರವಿದ್ದು, ದೀಕ್ಷೆಯನ್ನು ಪಡೆದು, ಇಷ್ಟಲಿಂಗ ಪಡೆದು ಶಿವಭಕ್ತನಾದ. ಬಸವಣ್ಣನನ್ನು ಅವರ ಅಕ್ಕ ನಾಗಮ್ಮನೂ ಹಿಂಬಾಲಿಸಿ ಬಂದಂತೆ ತೋರುತ್ತದೆ. ಈ ವೇಳೆಗೆ ಅಕ್ಕನಾಗಮ್ಮನಿಗೆ ಮದುವೆಯಾಗಿದ್ದೂ, ಆಕೆಯ ಪತಿ ಶಿವಸ್ವಾಮಿ ಸಂಗಮದವನೇ ಆಗಿದ್ದನೆಂದು ತಿಳಿದುಬರುತ್ತದೆ. ಕೂಡಲಸಂಗಮ ಬಸವಣ್ಣನ ಭಕ್ತಿ ಸಾಧನೆಯ ಕ್ಷೇತ್ರವಾಯಿತು. ಅವನು ಅಲ್ಲಿ ಕೆಲವು ವರ್ಷವಿದ್ದು ವಿದ್ಯಾಭ್ಯಾಸ ಪಡೆದ. ಸಮಾಜದ ಏರುಪೇರುಗಳನ್ನೂ ಧರ್ಮದ ದುರುಪಯೋಗವನ್ನು ಜನತೆಯ ಅಜ್ಞಾನವನ್ನೂ ಶೋಷಣೆಯನ್ನೂ ಕಂಡು ರೋಸಿದ ಬಸವಣ್ಣ ಅದನ್ನು ಪ್ರತಿಭಟಿಸಲು ಈ ವೇಳೆಗೆ ಪೂರ್ವಸಿದ್ಧತೆಯನ್ನು ಪಡೆದಿದ್ದರು. ಅವರು ಸಂಗಮವನ್ನು ಬಿಟ್ಟು ಕಲ್ಯಾಣಕ್ಕೆ ಹೋಗಲು ಕಾರಣವಾದ ಸನ್ನಿವೇಶದ ಇಲ್ಲಿ ಗಮನಿಸಬೇಕು. ಮಂಗಳವಾಡದಲ್ಲಿ ಬಿಜ್ಜಳನ ಬಳಿ ಭಂಡಾರಿಯಾಗಿದ್ದ ಬಲದೇವನು ಬಸವಣ್ಣನ ಸೋದರ ಮಾವ: ಮಾದಲಾಂಬೆಯ ಅಣ್ಣ. ಆತನಿಗೆ ಒಬ್ಬಳೇ ಮಗಳು ಗಂಗಾಂಬಿಕೆ. ಆಕೆಯನ್ನು ಬಸವಣ್ಣನಿಗೆ ಮದುವೆ ಮಾಡಿಕೊಡಲು ಉದ್ದೇಶಿಸಿ, ಗುರುಗಳ ಸಹಾಯದಿಂದ ಅವನನ್ನು ಒಪ್ಪಿಸಿ, ಆತನನ್ನು ಮಂಗಳವಾಡಕ್ಕೆ ಬರುವಂತೆ ಮಾಡಿಕೊಳ್ಳುವುದರಲ್ಲಿ ಯಶಸ್ವಿಯಾಗುತ್ತಾನೆ. ಬಸವಣ್ಣ, ಶಿವಸ್ವಾಮಿ ಮತ್ತು ಅಕ್ಕ ನಾಗಮ್ಮರ ಜೊತೆಯಲ್ಲಿಯೇ ಮಂಗಳವಾಡಕ್ಕೆ ಬಂದಂತೆ ತೋರುತ್ತದೆ. ಈ ವೇಳೆಗೆ ಅಕ್ಕನಾಗಮ್ಮ

ದಂಪತಿಗಳಿಗೆ ಎಂಟು ವರ್ಷದ ಚೆನ್ನಬಸವಣ್ಣ ಮಗನಿರುತ್ತಾನೆ. ಮುಂದೆ ಬಸವಣ್ಣನವರ ಕಾರ್ಯಕ್ಷೇತ್ರದೊಡನೆ ಇವರು ಒಂದಾಗಿ ಬೆರತುಹೋದುದನ್ನು ಕಾಣುತ್ತೇವೆ. ಮಂಗಳವಾಡದಲ್ಲಿ ಬಸವಣ್ಣ ಗಂಗಾಂಬಿಕೆಯನ್ನಲ್ಲದೆ, ಬಹುಶಃ ಸಿದ್ಧರಸಮಂತ್ರಿಯ ಮಗಳಾದ ನೀಲಾಂಬಿಕೆಯನ್ನು ಮದುವೆಯಾದರು. ಚಿಕ್ಕಂದಿನಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ಬಿಜ್ಜಳನ ಆಶ್ರಯದಲ್ಲೇ ಬೆಳೆದು ಆತನ ಸಾಕು ತಂಗಿಯಾಗಿದ್ದಳು. ಈ ಇಬ್ಬರನ್ನು ಮದುವೆಯಾಗುವುದಕ್ಕೆ ಒದಗಿಬಂದ ಕಾರಣಗಳೇನೆಂಬುದು ತಿಳಿಯದು. ಬಸವಣ್ಣ ಮಂಗಳವಾಡದಲ್ಲಿ ಒಂದೆರಡು ವರ್ಷಗಳು ಇದ್ದಂತೆ ತೋರುತ್ತವೆ. ಅಷ್ಟರಲ್ಲಿ ಬಲದೇವ ಕಾಲವಾದ ಮೇಲೆ ಬಿಜ್ಜಳ ಆತನ ಉತ್ತರಾಧಿಕಾರಿಯಾದ. ಬಸವಣ್ಣನನ್ನು ಗಣಕವಾಗಿ ನೇಮಕ ಮಾಡಿದ. ಹೀಗೆ ಒಂದು ಕಡೆ ರಾಜ್ಯದ ಭಂಡಾರಿಯಾಗಿ ಇನ್ನೊಂದು ಕಡೆ ಭಕ್ತಿಭಂಡಾರಿಯಾಗಿ ತಮ್ಮ ಕಾರ್ಯಕ್ಷೇತ್ರವನ್ನು ಪ್ರಾರಂಭಿಸುತ್ತಿದಂತೆಯೇ ಮತ್ತೊಂದು ಘಟನೆ ಸಂಭವಿಸಿತು. ಕಲ್ಯಾಣದ ಚಾಲಕ್ಯರಿಗೆ ಸಾಮಂತನಾಗಿದ್ದ ಬಿಜ್ಜಳ ತಾನೇ ಚಕ್ರವರ್ತಿಯಾಗಿ ಪರಿಣಮಿಸುವಂತಾಯಿತು. ಮೂರನೇ ಸೋಮೇಶ್ವರನಾದ ಮೇಲೆ ಚಾಲುಕ್ಯವಂಶ ದುರ್ಬಲವಾಗುತ್ತಾ ಬಂದಿತು. ನೆಪಮಾತ್ರಕ್ಕೆ ತೈಲಪನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಸರ್ವಾಧಿಕಾರಿಯಾಗಿ ತಾನೇ ಆಡಳಿತವನ್ನು ಮಂಗಳವಾಡದಿಂದಲೇ ನಿರ್ವಹಿಸಿದ..ಅದೂ ಸಾಧ್ಯವಿಲ್ಲದೇ ಹೋದಾಗ ತೈಲಪವನನ್ನು ತೆಗೆದುಹಾಕಿ ತಾನೇ ಸಿಂಹಾಸನವನ್ನೇರಿದ. ಆಗ ಮಂಗಳವಾಡದಿಂದ ಕಲ್ಯಾಣಕ್ಕೆ ಆತ ಬರಬೇಕಾಯಿತು. ಅವನೊಡನೆ ಬಸವಣ್ಣನವರು ಕಲ್ಯಾಣಕ್ಕೆ ಬಂದರು. ರಾಜಕೀಯದಲ್ಲಿ ಆಸಕ್ತರಲ್ಲದಿದ್ದರೂ ಕೇವಲ ಭಂಡಾರಿಯಾಗಿ ಮುಂದವರೆಯುವಂತೆ ಬಿಜ್ಜಳ ಒಪ್ಪಿಸಿದ. ಮುಂದೆ ಬಿಜ್ಜಳನು ಚಕ್ರವರ್ತಿಯಾಗಿ ಕಲ್ಯಾಣದ ಸಿಂಹಾಸನವನ್ನು ಏರಿದ ಮೇಲೆ ಬಸವನ ಸ್ಥಾನವೂ ಕಲ್ಯಾಣಕ್ಕೆ ವರ್ಗವಾಯಿತು. ಕಲ್ಯಾಣದಲ್ಲಿ ಅವರ ಕಾರ್ಯಕ್ಷೇತ್ರ ವಿಸ್ತಾರವಾಯಿತು. ಮಂಗಳವಾಡೆಗಿಂತ ದೊಡ್ಡ ಪಟ್ಟಣವಾಗಿದ್ದ, ಕರ್ನಾಟಕದ ಮಹಾರಾಜಧಾನಿಯಾಗಿ ೬ನೆಯ ವಿಕ್ರಮನ ಆಳ್ವಿಕೆಯಿಂದ ಬೆಳೆದು ಬಂದಿದ್ದ ಕಲ್ಯಾಣ ಬಸವಣ್ಣನವರ ಸಮಾಜಕಲ್ಯಾಣ ಕಾರ್ಯಗಳಿಗೆ ಕೇಂದ್ರವಾಗಿ ನಾಡಿನ ನಾನಾ ಭಾಗಗಳಿಂದ ಸಾಧಕರನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ನೂರಾರು ಶಿವಶರಣರು ಸಮಾವೇಶಗೊಂಡರು.

ಸಾಮಾಜಿಕ ಮತ್ತು ಧಾರ್ಮಿಕ ಸಮತೆಯನ್ನು ಕಾರ್ಯಗತಗೊಳಿಸುವ ಕ್ರಾಂತಿಕಾರಕ ಮಾರ್ಗದಲ್ಲಿ ಚನ್ನಬಸವ, ಅಲ್ಲಮ, ಸಿದ್ಧರಾಮ, ಮಡಿವಾಳ ಮಾಚಯ್ಯರಂತಹ ನಿಷ್ಠಾವಂತ ಶರಣರು ನೆರವಾಗಿ ನಿಂತರು, ಅನುಭವ ಮಂಟಪ ಸ್ಥಾಪಿತವಾಯಿತು. ಕೆಲವು ಕಾಲ ಅನುಭವ ಮಂಟಪದ ಅಗ್ರ ಪೀಠದಲ್ಲಿದ್ದು ಅಲ್ಲಿನ ಕಾರ್ಯಗಳನ್ನು ನಿರ್ದೇಶಿಸಿದ. ಭಂಡಾರಿಯ ಸ್ಥಾನದಲ್ಲಿದ್ದ ಬಸವಣ್ಣ ತನ್ನ ಧರ್ಮದ ಪ್ರಸಾರಕ್ಕಾಗಿ ತನ್ನ ಪ್ರಭಾವವನ್ನು ಬಳಸುವುದು ಸುಲಭವಾಯಿತು. ಅವನ 'ಮಹಾಮನೆ' ದೇಶದ ನಾನಾ ಕಡೆಗಳಿಂದ ಬರುತ್ತಿದ್ದ ಸದ್ಭಕ್ತರ ತಂಗು ದಾಣವಾಯಿತು.

ಇದು ಸಂಪ್ರದಾಯವಾದಿಗಳಿಗೆ ನುಂಗಲಾರದ ತುತ್ತಾಯಿತು. ಬಸವಣ್ಣನವರು ಪ್ರಬಲವಾದ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಅದನ್ನು ಲೆಕ್ಕಿಸದೆ ಅವರ ಕಾರ್ಯಕ್ಷೇತ್ರ ಬೆಳೆಯಿತು. ಅಸ್ಪೃಶ್ಯನಾಗಿದ್ದ ಹರಳಯ್ಯನ ಮಗನಿಗೂ ಬ್ರಾಹ್ಮಣನಾಗಿದ್ದ ಮಧುವರಸನ ಮಗಳಿಗೂ ಮದುವೆ ಮಾಡಿಸುವ ಪ್ರಯತ್ನವಾಯಿತು. ಅಂದಿನ ಸಮಾಜ ಅದನ್ನು ಅರಗಿಸಿಕೊಳ್ಳಲಾರದೆ ಹೋಯಿತು ವರ್ಣಸಂಕರವಾಯಿತೆಂದು ಹುಯಿಲೆಬ್ಬಿಸಿ ಧರ್ಮದ್ರೋಹಿಗಳಿಗೆ ಶಿಕ್ಷೆಯಾಗಬೇಕೆಂದು ಬಿಜ್ಜಳನಲ್ಲಿದೂರಿತ್ತರು. ಇದರಿಂದ ಹರಳಯ್ಯ ಮಧುವರಸರಿಗೆ ಬಿಜ್ಜಳ ದೇಹಾಂತ ಶಿಕ್ಷೆಯನ್ನು ವಿಧಿಸಿದುದಾಗಿ ತಿಳಿದುಬರುವುದು. ಇದು ಕಲ್ಯಾಣವೆಲ್ಲಾ ಪ್ರಕ್ಷುಬ್ಧಗೊಳ್ಳಲು ಕಾರಣವಾಯಿತು. ಬಿಜ್ಜಳನ ವಿರೋಧಿಯಾಗಿದ್ದ ರಾಜಕೀಯ ಗುಂಪೊಂದು ಬಿಜ್ಜಳನನ್ನು ಕೊಲೆ ಮಾಡಿ ಆ ಅಪವಾದವನ್ನು ಶರಣನ ತಲೆಗೆ ಕಟ್ಟಿದರು. ಅಂತು ಕಲ್ಯಾಣದಲ್ಲಿ ಬಸವಣ್ಣನವರು ಕಟ್ಟಿದ್ದ ಹೊಸ ಸಮಾಜದ ಕಾರ್ಯಸೌಧ ಕುಸಿದು ಬಿದ್ದಿತು. ಈ ಕೊನೆಯ ದಿನಗಳಲ್ಲಿ ಬಸವಣ್ಣನವರ ಜೀವನ ಕಡಿವೋ ನೆಂಬುದು ಸ್ಪಷ್ಟವಾಗುವುದಿಲ್ಲ. ಬಿಜ್ಜಳ ಕೊಲೆಯಾದೊಡನೆ ಶರಣರೆಲ್ಲಾ ಚೆದುರಿದರು. ಕ್ರಿ.ಶ. ೧೧೬೭-೬೮ ರ ನಂತರ ಕೆಲವೇ ದಿನಗಳಲ್ಲಿ ಬಸವಣ್ಣ ಸಂಗಮದಲ್ಲಿ ಐಕ್ಯರಾದರು.

ಶ್ರೀ ಬಸವನಾಳರ ಪರಿಷ್ಕರಣದಂತೆ ಬಸವಣ್ಣನವರ ವಚನಗಳ ಸಂಖ್ಯೆ 961, ಇವರ ವಚನಗಳ ಅಂಕಿತ 'ಕೂಡಲಸಂಗಮ ದೇವ' ವಚನಗಳು ಸಾಹಿತ್ಯ ಕೃತಿಗಳಾಗಬೇಕೆಂದು ರಚಿತವಾದವುಗಳಲ್ಲ; ಜನಜೀವನವನ್ನು ಅಸನುಗೊಳಿಸುವ ಶಕ್ತಿಯುತ ಸಾಧನಗಳಾಗಿ ಹೊರಹೊಮ್ಮಿದವು. ಬಸವಣ್ಣನವರು ಪ್ರಧಾನವಾಗಿ ಕವಿಯ : ಹಲವು ಕಾರ್ಯಗಳಿಗೆ ವಸ್ತುವಾಗಬಲ್ಲ ಮಹಾವ್ಯಕ್ತಿತ್ವವನ್ನು ಪಡೆದ ಅನುಭಾವಿ. ಅವರು ಜನಸಾಮಾನ್ಯರ ಜೀವನವನ್ನು ರೂಪಿಸಿದ ಮಹಾಶಿಲ್ಪಿ. ಬಸವಣ್ಣ ವಚನಗಳನ್ನು ಓದುವುದರಲ್ಲಿ ಒಂದು ವಿಶಿಷ್ಟ ಅನುಭವವಿದೆ, ವಚನಗಳನ್ನು ಕಂಡರಿಸಲು ಅವರು ಬಳಸಿದ ಮಾಧ್ಯಮ ಕನ್ನಡ ಭಾಷೆ. ತೀವ್ರವಾದ ಸಂವೇದನೆಯಿಂದ ಹೊರಹೊಮ್ಮಿದ, ಸುತ್ತಣ ಸಮಾಜವನ್ನು ಬಡಿದೆಬ್ಬಿಸಿದ ಕ್ರಾಂತಿಕಾರಕ ಭಾಷೆ. ಬಸವಣ್ಣನವರು ಮಹಾತ್ವಾಕಾಂಕ್ಷಿಯ ವ್ಯಕ್ತಿ; ಅಂತರಂಗದ ಸಾಧನೆ, ಸುತ್ತಣ ಸಮಾಜ ಎರಡನ್ನೂ ನಡೆಸುವ ನಿಷ್ಠೆ ಇದ್ದವರು. ವೇದನೆ, ಕೋಪ, ತಾಪ, ಛಲ ಸಂತೋಷ, ಉದ್ವೇಗ ನಿರಾಸೆ, ಹತಾಶೆ, ವಿನಯ, ಏಳುಬೀಳು, ಪರಕೀಯತೆ ಈ ಎಲ್ಲ ರಾಗ ಭಾವಗಳನ್ನೂ ಅವರ ವಚನಗಳಲ್ಲಿ ಕಾಣುತ್ತೇವೆ. ಅವರ ವಚನಗಳು ಮನುಷ್ಯನ ಚಿತ್ತಸ್ಥಿತಿಯ ವಿವಿಧ ಮುಖಗಳ ಪ್ರದರ್ಶನ ಶಾಲೆ. ಶಿವಶರಣರಲ್ಲೇ ಇಷ್ಟು ಭಾವುಕನಾದ ಮುಕ್ತ ಮನಸ್ಸಿನ ವ್ಯಕ್ತಿ ಮತ್ತೊಬ್ಬನಿಲ್ಲ ಎನಿಸುತ್ತದೆ. ಹಾಗಾಗಿ ಅವರ ವಚನಗಳಿಗೆ ಕಾವ್ಯತ್ವ ಪ್ರಾಪ್ತವಾಗುವುದು ಇದರಿಂದಲೆ ಎನ್ನಿಸುತ್ತದೆ, ಬಸವಣ್ಣ ಮತ್ತು ಅವರ ವಚನಗಳೂ ನಮಗೆ ತೀರ ಹತ್ತಿರವಾಗುವುದು ಈ ಗುಣದಿಂದಲೇ ಎಂದು ಹೇಳಬಹುದು. ಭಕ್ತ ಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗ ಸ್ಥಲ, ಶರಣ ಸ್ಥಲ ಮತ್ತು ಐಕ್ಯ ಸ್ಥಲಗಳೆಂಬ ಬಸವಣ್ಣನ ಷಟ್ಸ್ಥಲ ವಚನಗಳಲ್ಲಿ ಉದಾಹರಣೆಗಾಗಿ ಕೆಲವನ್ನು ಇಲ್ಲಿ ಪರಿಶೀಲಿಸೋಣ. ಆತನ ಎಲ್ಲ ವಚನಗಳನ್ನೂ ಅಧ್ಯಯನ ಮಾಡುವುದು ಅತ್ಯವಶ್ಯಕವಾದುದು.

ಅವನ ಭಕ್ತಿಸ್ಥಲದ ವಚನಗಳಲ್ಲಿ ಅವನ ಭಕ್ತಿಯ ಸಾಧನೆಯ ವಿವಿಧ ಮುಖಗಳೂ ಆತ್ಮ ವಿಮರ್ಶೆಯೂ ಕಾಣುತ್ತದೆ. ಅಲ್ಲಲ್ಲಿ ತನ್ನ ತನವನ್ನು ತಾನು ಗುರುತಿಸಿಕೊಳ್ಳುವ ಒಂದು ಹೋರಾಟವಿದೆ.

ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ;

ಎನ್ನುವನು ಕಾಯಯ್ಯ, ಕಾಯಯ್ಯ;

ಹುರುಳಿಲ್ಲ ! ಹುರುಳಿಲ್ಲ!

ಕೂಡಲಸಂಗಮ ದೇವಾ ಶಿವಧೋ ಶಿವಧೋ.

ಅವನು ಸಂಸಾರದಲ್ಲಿ ಅನುಭವಿಸಿದ ಬೇಗೆಯನ್ನು ಓದುಗರಿಗೆ ತೀವ್ರ ರೀತಿಯಲ್ಲಿ ತಂದುಕೊಡುತ್ತದೆ. ಇಲ್ಲಿ ಯಾವುದೇ ಅಲಂಕಾರವೂ ಇಲ್ಲದೆ 'ಬಲೆ' ಎನ್ನುವ ಸಾಮಾನ್ಯ ಶಬ್ದ ಚಿತ್ರವೊಂದನ್ನು ಬಿಟ್ಟರೆ ಸರಳವಾಗಿದೆ. ಅದರ ಸರಳತೆಯ ಅಭಿವ್ಯಕ್ತಿಯೇ ಅದರ ಶ್ರೇಷ್ಠಾಂಶವಾಗಿದೆ.

ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ,

ವಿಚಾರಿಸಿದಡೇನೂ ಹುರುಳಿಲ್ಲವಯ್ಯಾ,

ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಹ ಮಾಡಿ

ನೀವಿರಿಸಿದಿರಿ ಕೂಡಲ ಸಂಗಮದೇವಾ

ಈ ವಚನದಲ್ಲಿ ಲೋಕದ ಸಂಗತಿಯೊಂದರ ವೈಚಿತ್ರ್ಯವನ್ನು ಬಳಸಿಕೊಂಡು ತನ್ನ ಮನಸ್ಸಿನ ಸ್ಥಿತಿಯನ್ನು ವಿವರಿಸುತ್ತಾನೆ. ಅತ್ತಿಯ ಹಣ್ಣು-ನೋಡಲು ಹೊರಗೆ ಚೆಂದ, ಒಳಗೆ ಬರಿಯ ಹುಳು. ಈ ಸಮಾಜವೆಂಬ ಮೋಸದಲ್ಲಿ ತನ್ನನ್ನೂ ಒಂದು ಮೋಸದ ಆಕಾರವೆಂದು ಕರೆದುಕೊಂಡು ತನ್ನನ್ನು ತಾನು ಟೀಕಿಸಕೊಳ್ಳುತ್ತಾನೆ. ಅತ್ತಿಹಣ್ಣಿನ ಪ್ರತಿಮೆ ಜನಸಾಮಾನ್ಯರ ಮಟ್ಟದಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ.

ಹಾವು ತಿಂದವರ ನುಡಿಸಬಹುದು,

ಗರ ಹೊಡೆದವರ ನುಡಿಸಬಹುದು,

ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ

ಬಡತನವೆಂಬ ಮಂತ್ರವಾದಿ ಹೋಗಲು

ಒಡನೆ ನುಡಿದರು ಕೂಡಲಸಂಗಮದೇವ

ಶ್ರೀಮಂತರ ಅಹಂಕಾರವನ್ನು ಇದು ಹೇಳುತ್ತದೆ. ಹಾವು ಕಚ್ಚಿದವರನ್ನಾದರೂ ಮಾತನಾಡಿಸಬಹುದು. ಗರ (ಗ್ರಹ, ದೆವ್ವ) ಹೊಡೆದವರನ್ನೂ ಬೇಕಾದರೂ ಮಾತನಾಡಿಸಬಹುದು. ಆದರೆ 'ಸಿರಿಗರ' ಅಥವಾ ಐಶ್ವರ್ಯವೆಂಬ ಗ್ರಹ (ದೆವ್ವ) ಹಿಡಿವರನ್ನು ಮಾತನಾಡಿಸಲು ಯಾರಿಂದಲೂ ಆಗದು. ಅವರು ಸಹಜ ಸ್ಥಿತಿಬರಲು ಬಡತನವೆಂಬ ಮಂತ್ರವಾದಿಯೇ ಬರಬೇಕು. ಗರ ಹೊಡೆಯುವುದು ಮಂತ್ರವಾದಿ ಬಿಡಿಸುವುದು ಗ್ರಾಮೀಣರಲ್ಲಿ ಪರಿಚಿತ ಸಂಗತಿಯೇ ಆದರೆ ಶ್ರೀಮಂತಿಕೆಯ ವಿಡಂಬನೆಗೆ ಬಳಸಿಕೊಂಡಿರುವ ರೀತಿ ಮಾತ್ರ ಅಪೂರ್ವ.

ನುಡಿದರೆ ಮುತ್ತಿನ ಹಾರದಂತಿರಬೇಕು

ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು

ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು

ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು.

ಆಡಿದ ಮಾತು ಹೇಗಿರಬೇಕು ಎಂಬುದನ್ನು ಬಸವಣ್ಣ ಇಲ್ಲಿ ಮೂರು ಪ್ರತಿಮೆಗಳ ಮೂಲಕ ಹೇಳುತ್ತಾನೆ. ಹಾರದಲ್ಲಿ ಮಣಿಗಳು ಜೋಡಣೆಗೊಂಡಿರುವಂತೆ ಪದಗಳು ಇರಬೇಕು. ರತ್ನವು ಸ್ವಯಂ ಪ್ರಕಾಶವನ್ನುಳ್ಳದ್ದು: ಹಾಗೆಯೇ ಮಾತುಗಳಿಗೂ ಅರ್ಥ ಉಂಟು. ಆದರೆ ಆ ರತ್ನವನ್ನು ಹೇಗೆ ಕುಶಲಿ ಕೆತ್ತುತ್ತಾನೋ ಹಾಗೆ ಅದರಿಂದ ದೀಪ್ತಿ ಹೊಮ್ಮುತ್ತದೆ, ಮಾತುಗಳಿಂದ ಸರಿಯಾದ ಅರ್ಥವನ್ನು ಹೊಮ್ಮಿಸಲು ಕೌಶಲಬೇಕು ಮತ್ತು ಎಚ್ಚರಬೇಕು. ಹಾರದ ಚಿತ್ರವು ಮಾತುಗಳ ಬಾಹ್ಯ ಜೋಡಣೆಯನ್ನು ಅಂದರೆ 'ಶಬ್ದಾಲಂಕಾರ'ವನ್ನು ಹೇಳಿದರೆ 'ಮಾಣಿಕ್ಯದ ದೀಪ್ತಿ'ಯ ಚಿತ್ರವು ಮಾತುಗಳಿಗೆ ಇರುವ ಅರ್ಥ ಅಥವಾ ಅರ್ಥಛಾಯೆಗಳನ್ನು ಸೂಚಿಸುತ್ತದೆ. 'ಸ್ಫಟಿಕದ ಶಲಾಕೆ'ಯ ಚಿತ್ರವು ಭಾಷೆಯ ಇನ್ನೂ ಒಳಗಿನ ಸ್ತರಕ್ಕೆ ಕರೆದೊಯ್ಯುತ್ತದೆ. ಪೂರ್ಣ ವಿಗ್ರಹವನ್ನು ಕೆತ್ತಿದ ಶಿಲ್ಪಿಗಳು ಕೊನೆಯಲ್ಲಿ ಅದರ ಕಣ್ಣನ್ನು ಬಿಡಿಸಲು ಸ್ಫಟಿಕದ ಶಲಾಕೆಯನ್ನು ಬಳಸುತ್ತಿದ್ದರು. 'ಸ್ಫಟಿಕದ ಶಲಾಕೆ' ಇಡೀ ಮಾತಿಗೆ-ರಚನೆಗೆ-ಅರ್ಥವಂತಿಕೆಯನ್ನು ತಂದುಕೊಡುವ ಕೇಂದ್ರ ಭಾವದ ಸಂಕೇತವಾಗಬಹುದು. ಬಸವಣ್ಣ ಸ್ವತಂತ್ರದ ಹೆಸರಿನಲ್ಲಿ ಸ್ವಚ್ಛಂದವನ್ನು ತಂದು ಕೊಡುವ ಕೇಂದ್ರ ಭಾವದ ಸಂಕೇತವಾಗಬಹುದು. ಬಸವಣ್ಣ ಸ್ವತಂತ್ರದ ಹೆಸರಿನಲ್ಲಿ ಸ್ವಚ್ಛಂದವನ್ನು ಇಚ್ಛಿಸಿದವರಲ್ಲ. ಅವರು ಸೇವೆಯಲ್ಲಿ ಸ್ವತಂತ್ರವನ್ನೂ, ಧ್ಯಾನದಲ್ಲಿ ಸ್ವಚ್ಛಂದವನ್ನು ಬಯಸಿದರು - "ಪರಚಿಂತೆ ನಮಗೇಕಯ್ಯ? ನಮ್ಮ ಚಿಂತೆ ನಮಗೆ ಸಾಲದೆ? ಕೂಡಲಸಂಗಯ್ಯ ಒಲಿದಾನೋ, ಒಲಿಯನೋ ಎಂಬ ಚಿಂತೆ ಹಾಸಲುಂಟ ಹೊದಿಯಲುಂಟು!" ಮತ್ತೆ "ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯ ತಂದೆ; ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ; ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಕ್ಕೆಳಸದಂತೆ ಇರಿಸು ಕೂಡಲಸಂಗಮದೇವ!" ಸಾಧಕನೊಬ್ಬನ ಆರೋಹಣ ಯಾತ್ರೆಯಲ್ಲಿ ತನುವಿಕಾರ ಮನೋವಿಕಾರಗಳು ಆತ್ಮವನ್ನು ಕೆಳಕ್ಕೆ ಜಗ್ಗುವವು, ದಿಗ್ಭ್ರಾಂತಿಗೊಳಿಸಿ ದಾರಿ-ತಪ್ಪಿಸುವವು. ಆ ವಿಕಾರಗಳ ಉಪಟಳಕ್ಕೆ ಸಿಕ್ಕಿದ ಆತ್ಮದ ಶೋಚನೀಯ ಸ್ಥಿತಿಯನ್ನು ಎಂಟು ದಿಕ್ಕಿನಿಂದ ನಾಯಿಗಳು ಅಟ್ಟಿ, ಬಂದಾಗ ನಡುವೆ ಸಿಕ್ಕಿದ ಮೊಲದ ಪರಿಸ್ಥಿತಿಗೆ ಹೋಲಿಸಿದ್ದಾರೆ. ಬಸವಣ್ಣ ತಮ್ಮ ಆತ್ಮವು ವಿಕಾರ ಶ್ವಾನಗಳಿಗೆ ಬಲಿ ಬೀಳುವುದಕ್ಕೆ ಮೊದಲೇ

ಶಿವನ ಮೊರೆಹೊಕ್ಕು ಪರಮ ಪದವಿಯಲ್ಲಿ ಸುರಕ್ಷಿತವಾಗಿರಲೆಂಬುದೇ ಅವರ ಹಂಬಲ-" ಒಂದು ಮೊಲಕ್ಕೆ ನಾಯಿನೊಂಬತ್ತು ಬಿಟ್ಟಂತೆ, ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ! ಎನ್ನ ಬಿಡು ತನ್ನ ಬಿಡೆಂಬುದು ಮನೋವಿಕಾರ ! ಕರಣೇಂದ್ರಿಯ ಗಳೆಂಬ ಸೊಣಗ ಮುಟ್ಟದ ಮುನ್ನ ನಿಮ್ಮನೆಯ್ದುಗೆ ಕೂಡಲ ಸಂಗಮದೇವ!".

ಬಸವಣ್ಣನವರ ವಚನಗಳು ಎಲ್ಲವೂ ಶ್ರೇಷ್ಠ ಹಾಗೆ ನೋಡಿದರೆ ಅವನಲ್ಲಿ ಅತ್ಯುತ್ತಮ ವಚನವಿಲ್ಲ;ಅತ್ಯುತ್ತಮ ವಚನಗಳಿವೆ. ಪಶು-ಪಕ್ಷಿ ಪ್ರಕೃತಿಯ ಮಿಶ್ರಣ ರೂಪಕಗಳೂ ಅವರ ವಚನಗಳಲ್ಲಿ ಯಥೇಚ್ಛವಾಗಿವೆ. ಇಲ್ಲಿಕೆಲವನ್ನು ಮಾತ್ರ ಅಧ್ಯಯನದ ಪ್ರವೇಶಕ್ಕಾಗಿ ವಿವರಿಸಲಾಗಿದೆ. ಸ್ವತಃ ಅವರ ಎಲ್ಲ ವಚನಗಳನ್ನು ಅಭ್ಯಸಿಸುವುದು.

## 4.2.4 ಅಕ್ಕಮಹಾದೇವಿ

ಕಾಲ ಯಾವುದು? ಅಕ್ಕ ಮಹಾದೇವಿ ಇದ್ದದ್ದು ಕ್ರಿ. ಶ. ಸು. 1160: ಹನ್ನೆರಡನೆಯ ಶತಮಾನ. ಅಕ್ಕಮಹಾದೇವಿ ಎಂದು ಪ್ರಸಿದ್ಧಳಾಗಿರುವ ಮಹಾದೇವಿಯಕ್ಕ ವಚನ ಸಾಹಿತ್ಯಕಾಶದ ಉಜ್ವಲ ನಕ್ಷತ್ರ. ಅಕ್ಕನನ್ನು ಕುರಿತ ಆಧಾರ ಸಾಹಿತ್ಯ ಯಾವುವು? ಅಕ್ಕನನ್ನು ಕುರಿತ ಆಧಾರ ಸಾಹಿತ್ಯ, ಕಾಲಕ್ರಮಕ್ಕೆ ಅನುಗುಣವಾಗಿ ಹೀಗಿದೆ : ಹರಿಹರನ 'ಮಹಾದೇವಿಯಕ್ಕನ ರಗಳೆ', ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತ್ರೆ', ಚಾಮರಸನ 'ಪ್ರಭುಲಿಂಗ ಲೀಲೆ', ಯಳಂದೂರು ಹರೀಶ್ವರ 'ಪ್ರಭುದೇವರ ಪುರಾಣ' ಚನ್ನಬಸವಾಂಕನ 'ಮಹಾದೇವಿಯಕ್ಕನ ಸಾಂಗತ್ಯ', ಇವುಗಳಲ್ಲಿನ ಹೇಳಿಕೆಗಳಲ್ಲಿ ಸತ್ಯಾಂಶಗಳಿದ್ದರೂ ನಿಜವಾದ ಅರ್ಥದಲ್ಲಿ ಐತಿಹಾಸಿಕ ದಾಖಲೆಗಳಲ್ಲವಾದ್ದರಿಂದ ಪೂರ್ಣವಾಗಿ ವಿಶ್ವಾಸಾರ್ಹ ಎನ್ನುವಂತಿಲ್ಲ. ಆದರೂ ಈ ಸಾಹಿತ್ಯ ಮತ್ತು ಅಕ್ಕನ ಸಮಕಾಲೀನರ ವಚನಗಳು ಅವಳ ಜೀವನ ಚರಿತ್ರೆಯನ್ನು ತಿಳಿದಮಟ್ಟಿಗೆ ರೂಪಿಸಿಕೊಳ್ಳುವಲ್ಲಿ ಸಹಾಯ ಮಾಡುತ್ತವೆ.

ಅಕ್ಕ, ಬಸವಾದಿ ಶಿವಶರಣರ ಸಮಕಾಲೀನೆ : ಆಕೆ ಉಡುತಡಿ ಎಂಬ ಗ್ರಾಮದಲ್ಲಿ ಶಿವಭಕ್ತರ ಮಗಳಾಗಿ ಜನಿಸಿದ್ದಳು : ಈ ಉಡುತಡಿ ಯಾವುದು ಎಂಬುದರಲ್ಲಿ ಭಿನ್ನಾಭಿಪ್ರಾಯವಿದೆ. ಕಲುಬುರ್ಗಿ ಜಿಲ್ಲೆಯ 'ಮಹಾಗಲ್' ಎಂಬ ಗ್ರಾಮವೇ ಮೊದಲು ಉಡುತಡಿಯಾಗಿತ್ತೆಂದೂ ಊಹೆ ಮಾಡಿದ್ದರೂ, ಈಗಿನ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಗೆ ಸಮೀಪದ ಉಡುಗಣೆ-ತಡಗಣೆ ಎಂಬ ಗ್ರಾಮಗಳೇ ಅಕ್ಕನ ಊರಾದ ಉಡುತಡಿ ಎಂದೂ ಬಹುಮಟ್ಟಿಗೆ ಅಂಗೀಕರಿಸಲಾಗಿದೆ. ಅಕ್ಕನ ತಂದೆತಾಯಿಗಳು ನಿರ್ಮಲ ಸಮತಿಯರೆಂದು ಚಾಸುಮರ. ಎಳಂದರೂ ಹರೀಶ್ವರ, ಚನ್ನಬಸವಾಂಕರ ಹೇಳಿಕೆ. ಆಕೆಯು ತನ್ನ ಬಾಲಲೀಲೆಯನ್ನು ಈ ಶಿವ ಲೀಲೆಯಲ್ಲಿ ಕಳೆದಳೆಂದು ಹರಿಹರಾದಿ ಕವಿಗಳ ಹೇಳಿಕೆ. ಆಕೆಯು ತನ್ನ ಕೌಶಿಕನೊಂದಿಗೆ ಮದುವೆಯಾಗಿದ್ದಳೆಂದು ಕೆಲವರು ಆಗಿರಲಿಲ್ಲವೆಂದು ಮತ್ತೆ ಕೆಲವರು, ಮದುವೆಯಾಗದ್ದಿತಾದರ ಅವರಿಬ್ಬರ ನಡುವೆ ದೈಹಿಕ ಸಂಬಂಧವಿರಲಿಲ್ಲವೆಂದು ಇನ್ನೂ ಕೆಲವರೂ ಅಭಿಪ್ರಾಯಪಟ್ಟಿದ್ದಾರೆ. ರೂಪವತಿಯಾಗಿದ್ದ ಮಹಾದೇವಿಯನ್ನು ಕೌಶಿಕನೆಂಬ ದೊರೆ ಮೋಹಿಸಿದ್ದನೆಂಬುದು ನಿರ್ವಿವಾದವಾದ ಸಂಗತಿ. ಅಕ್ಕನ ಕಾಲದಲ್ಲಿ(೧೧೬೦-೬೫) ಉಡುತಡಿಯನ್ನು ಆಳುತ್ತಿದ್ದವನು ಕಸಪಯ್ಯನಾಯಕ. ಈತ ಬಿಜ್ಜಳನ ಪ್ರತಿನಿಧಿ. ಈ ಕಸಪಯ್ಯ ನಾಯಕನೇ ಕೌಶಿಕ ಸಿದ್ದರಿಬಹುದು ಎಂಬ ಪ್ರಾಯವಿದೆ. ಕೌಶಿಕನನ್ನು ತ್ಯಜಿಸಿದ ಮೇಲೆ ಅಕ್ಕಮಹಾದೇವಿ ಕಲ್ಯಾಣಕ್ಕೆ ಹೋದುದರಿಂದ ಅಲ್ಲಿಯ ಶಿವಶರಣರ ಬೆಂಬಲ ದೊರೆತು ಕೌಶಿಕ ಮೇಲಧಿಕಾರಿಯಾದ ಬಿಜ್ಜಳನಿಗೆ ಈ ವಿಷಯ ತಿಳಿದು ಅವನನ್ನು ದೊರೆತನದಿಂದ ಕೆಳಗಿಳಿಸಲು ಪ್ರಚೋದನೆ ಉಂಟಾಗಿರಬಹುದು. ಮಹಾದೇವಿ ಕೌಶಿಕನನ್ನು ತ್ಯಗದಿಗಂಬರೆಯಾಗಿ ಹೊರಟವ್ವರ ಬಗ್ಗೆ ಆಕೆಯು ಕೆಲವು ವಚನಗಳು ಉಲ್ಲೇಖಾರ್ಹವಾಗಿವೆ :

ಕೈಸಿರಿಯ ದಂಡವ ಕೊಳಬಹುದಲ್ಲವೆ

ಮೈಸಿರಿಯ ದಂಡವ ಕೊಳಬಹುದೆ?

ಉಟ್ಟಂತ ಉಡಿಗೆ ತೊಡಿಗೆಯನ್ನೆಲ್ಲ ಸೆಳೆದುಕೊಳಬಹುದಲ್ಲದೆ

ಮುಚ್ಚಿ ಮುಸುಕಿರ್ದ ನಿರ್ವಾಣದ ಸೆಳೆದುಕೊಳಬಹುದೇ?

ಚೆನ್ನಮಲ್ಲಿಕಾರ್ಜುನನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ

ಉಡುಗೆ ತೊಡಿಗೆಯ ಹಂಗೇಕೋ ಮರುಳೇ?

ಕಾಶಿಕನನ್ನು ತೊರೆದುಬಂದ ಮಹಾದೇವಿ ದಾರಿಯಲ್ಲಿ ನಾನಾ ರೀತಿಯ ಕಷ್ಟನಷ್ಟಗಳಿಗೆ ಗುರಿಯಾಗಿರಬೇಕು. ಕೌಶಿಕ ಕಿನ್ನರಿಬೊಮ್ಮಯರು ಆಕೆಯನ್ನು ಒಲಿಸಿಕೊಳ್ಳಲು ಯತ್ನಿಸಿ ವಿಫಲರಾಗುತ್ತಾರೆ. ಅಲ್ಲಮ ಪ್ರಭು ಒಡ್ಡಿದ ಪರೀಕ್ಷೆಯಲ್ಲಿ ಗೆದ್ದ ಅಕ್ಕನನ್ನು ಕಾಮಸಂಹಾರಿ ಎಂದು ಲೋಕಕ್ಕೆ ಸ್ಪಷ್ಟಪಡಿಸಿ ಹೊಗಳುತ್ತಾನೆ. ಕಲ್ಯಾಣದಲ್ಲಿದ್ದ ಅಕ್ಕಮಹಾದೇವಿ ಶರಣ ಪರಿಸರದಲ್ಲಿ ಅಪಾರಗೌರಕ್ಕೆ ಪಾತ್ರಳಾಗಿದ್ದಳೆಂದೂ, ತುಂಬ ತೃಪ್ತಿಯೂ ಇದ್ದಿತೆಂದೂ ಆಕೆಯ ವಚನಗಳಿಂದ ತಿಳಿದು ಬರುತ್ತದೆ. ಮಹಾದೇವಿ ತನ್ನ ಕಾಲದ ಶರಣ ಸಮೂಹದ ಮೇಲೆ ಗಾಢವಾದ ಪ್ರಭಾವವನ್ನೂ ಬೀರಿದವಳು. ಪ್ರಭು, ಬಸವಣ್ಣಾದಿಗಳಿಗಿಂತ ವಯಸ್ಸಿನಲ್ಲಿ ಕಿರಿಯಳಾದರೂ ಅನುಭವದಲ್ಲಿ ಹಿರಿಯಳಾದ ಆಕೆಯನ್ನು 'ಅಕ್ಕ'ನೆಂದು ಒಪ್ಪಿಕೊಂಡು ಗೌರವಿಸಲಾಗಿದೆ. ಕೊನೆಗೆ ಅಕ್ಕಮಹಾದೇವಿ ಕಲ್ಯಾಣದಿಂದ ಶ್ರೀಶೈಲದ ಕದಳಿಯತ್ತ ಸಾಗಿದಳೆಂದೂ, ಅಲ್ಲಿಯೇ ಐಕ್ಯಳಾದಳೆಂದು ತಿಳಿದು ಬರುತ್ತದೆ.

ಅಕ್ಕಮಹಾದೇವಿ ಪ್ರಥಮ ಹಾಗೂ ಶ್ರೇಷ್ಠ ಕವಿಯತ್ರಿ :ಅವಳ ವಚನಗಳು ವಿಶಿಷ್ಟ ಶಕ್ತಿಯಿಂದ ಕೂಡಿವೆ. ಸುಮಾರು 350 ವಚನಗಳು ಅವಳ ಹೆಸರಿನಲ್ಲಿ ಪ್ರಕಟವಾಗಿವೆ. ಈ ವಚನಗಳಲ್ಲದೆ 'ಸೃಷ್ಟಿಯ ವಚನ', 'ಯೋಗಾಂಗ ತ್ರಿವಧಿ' ಅನೇಕ ಪದಗಳು ಆಕೆಯ ಹೆಸರಿನಲ್ಲಿವೆ. ಶ್ರೇಷ್ಠ ವಚನಕಾರರ ಸಾಲಿನಲ್ಲಿ ಮತ್ತು ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿಯ ಹೆಸರು ಚಿರಸ್ಥಾಯಿಯಾದುದು. ಅಕ್ಕನ ತೀವ್ರ ವಿರಕ್ತಿ ಮತ್ತು ಆರ್ತಪ್ರಾರ್ಥನೆ, ಆಧ್ಯಾತ್ಮ ಪ್ರಣಯಿನಿಯ ವಿಕಳಾವಸ್ಥೆ, ಪ್ರೀತಿಯ ಪರಮಾವಧಿಯ ಉನ್ಮಾದ, ವಿರಹವೇದನೆ, ಸಮ್ಮಿಲನದ ಹರ್ಷೋದ್ವೇಗ ಈ ಎಲ್ಲ ಭಾವಗಳೂ, ಅವಳ ಸಾಧನೆಯ ಎಲ್ಲ ಹಂತಗಳಲ್ಲೂ, ಅವಳ ವಚನಗಳಲ್ಲಿ ತೀವ್ರ ಸ್ವರೂಪದಲ್ಲಿ ವ್ಯಕ್ತವಾಗಿವೆ. ಆಧ್ಯಾತ್ಮಿಕವಾದ ಭಾವಗಳನ್ನು ವಾಸ್ತವಿಕ ಜಗತ್ತಿನ ವಸ್ತು ಪ್ರತಿರೂಪಗಳ ಮೂಲಕ ಅಭಿವ್ಯಕ್ತಿಸುವುದರಿಂದ ಆಕೆಯ ವಚನಗಳಲ್ಲಿ ಜೀವಂತಿಕೆ ಇದೆ. ಯಾವುದಾದರೂ ಒಂದು ತತ್ತ್ವದ ಅಥವಾ ಅನುಭವಕ್ಕೆ ಬಂಧ ಸತ್ಯದ ಹೇಳಿಕೆ ವಚನದ ಉದ್ದೇಶವಾಗಿರುತ್ತದೆ. ಅದಕ್ಕೆ ಬೇಕಾದ ಉಪಮಾನ ಅಥವಾ ದೃಷ್ಟಾಂತಗಳಿಂದ ವಚನ ಪ್ರಾರಂಭವಾಗಿತ್ತದೆ. ಇವು ಸಮರ್ಥಿಸಬೇಕಾದ ಮಾತು ವಚನದ ಕೊನೆಗೆ ಬರುತ್ತದೆ. ಇದು ಅಕ್ಕನ ವಚನಗಳ ಅಭಿವ್ಯಕ್ತಿ ರೀತಿಯ ಸಾಮಾನ್ಯ ಲಕ್ಷಣ.

ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ!

ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ

ಚೆಲುವಂಗಾನೊಲಿದೆನವ್ವ!

ಭಯವಿಲ್ಲದ ಭವವಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ

ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ

ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ!

ತಾನು ಒಲಿದ ಆ ಸುಂದರ ಪುರುಷನಿಗೆ ಸಾವುಇಲ್ಲ, ಕೇಡೂ ಇಲ್ಲ ಎಂದು ಹೇಳಿರುವಲ್ಲಿ ಇಹದ ಬಗ್ಗೆ ಅವಳಿಗಿರುವ ತಿರಸ್ಕಾರ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಲೋಕದ ಗಂಡಸರನ್ನೂ ತಿರಸ್ಕರಿಸಿರುವ ರೀತಿ ತಿಳಿಯುತ್ತದೆ. ಬಹುಶಃ ಕೌಶಿಕನನ್ನು ಕೈಹಿಡಿಯಲು ಒತ್ತಾಯ ಬಂದಾಗ

ಅಡಿರಬಹುದಾದ ವಚನವಿದು. ಇನ್ನೊಂದು ವಚನದಲ್ಲಿ ಅವಳು ಶಿವನಿಗೆ ಹೊಳೆಯುವ 'ಕೆಂಜಡೆಗಳುಂಟು', 'ಮಣಿ ಮಕಟುವೂ' ಉಂಟು, ಕೆಂಜೆಡೆಯ ಮೇಲೆ 'ಎಳೆವೆಳುದಿಂಗಳು' ಉಂಟು ನಾಗಾಭರಣ, ರುಂಡಮಾಲೆಗಳು ಸಮೇತವೂ ಕಾಣಿಸಿರುವುದುಂಟೆಂದು ಹೇಳಿದ್ದಾಳೆ. ವೈಷ್ಣವ ಭಕ್ತರ ಕೃಷ್ಣನ ಕೊಂಡಾಟ ನೆನಪಿಗೆ ಬರುವುದು.

ಇತರ ವಚನಕಾರರಂತೆ ಅಕ್ಕನೂ ಕೂಡ ತನ್ನನ್ನು ತಾನು ನಿಷ್ಠುರವಾಗಿ ಸ್ವವಿಮರ್ಶೆಗೆ ಒಳಪಡಿಸಿಕೊಂಡು ತನ್ನೊಳಗಣ ಕೋಟಲೆಯನ್ನು ತನ್ನ ವಚನಗಳಲ್ಲಿ ಮುಚ್ಚು ಮರೆಯಿಲ್ಲದೆ ಅಭಿವ್ಯಕ್ತಿಸಿದ್ದಾಳೆ. ಅಕ್ಕನದು ಸಿದ್ಧ ವೈರಾಗ್ಯವಲ್ಲ;ಸಿದ್ಧಿಸಿಕೊಂಡ ವೈರಾಗ್ಯ. ಈ ಮಾನವೀಯ ದೇಹದ ಮನಸ್ಸಿನ ಮೂಲಕ ಅಕ್ಕ ಸಿದ್ಧಿಯ ಮೆಟ್ಟಲುಗಳನ್ನು ಏರುವಾಗ ಆಕೆಯಲ್ಲೂ ಸಹಜವಾದ ಘರ್ಷಣೆಯಿತ್ತು. ಈ ಲೋಕದ ಸೆಳತದಿಂದ ಪಾರಾಗುವ ಅಕೆ ಚೆನ್ನಮಲ್ಲಿಕಾರ್ಜುನನ ಕೃಪೆಗಾಗಿ ಬೇಡುತ್ತಾಳೆ.'ಎನ್ನಕಾಯ ಮಣ್ಣು ಜೀವ ಬಯಲು','ಅವಾಗಳೂ ಎನ್ನ ಮನ ಉದರಕ್ಕೆ ಹರಿವುದು...' 'ಸಂಸಾರವೆಂಬ ಹಗೆಯಯ್ಯ ತಂದೆ' ಎಂಬ ವಚನಗಳನ್ನು ನೋಡಬಹುದು.

ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ

ತನ್ನ ನೂಲು ತನ್ನನ್ನೇ ಸುತ್ತಿ ಸುತ್ತಿ ಸಾವ ತೆಱನಂತೆ

ಮನ ಬಂದುದ ಬಯಸಿ ಬಯಸಿ ಬೇವುತ್ತಿರುವೆನಯ್ಯ

ಅಯ್ಯಾ ಎನ್ನ ಮನದ ದುರಾಶೆಯ ಮಾಣಿಸಿ

ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ.

ಇಲ್ಲಿ ಅಕ್ಕನ ಮಾನಸಿಕ ತೊಳಲಾಟವನ್ನು ಈ ವಚನದಲ್ಲಿ ಕಾಣಬಹುದು. ರೇಷ್ಮೆಯ ಹುಳು ತಾನೆಗೂಡುಕಟ್ಟಿ ಆ ಗೂಡಲ್ಲಿ ಸೇರಿ ಸಾವ ತಂದುಕೊಳ್ಳವಂತೆ ಮನದ ಬಯಕೆಯ ಬೇಗೆಯಲ್ಲಿ ಬೇಯುವ ಬಗೆಯನ್ನು ಅಕ್ಕ ಸೊಗಸ್ಸಾಗಿ ಚಿತ್ರಿಸಿದ್ದಾಳೆ. ಇದರಲ್ಲಿ ಧ್ವನಿಶಕ್ತಿ ಶಕ್ತಿಯುತವಾಗಿದೆ. ಮಾಯದ ಸಂಸಾರದಲ್ಲಿ ಸಿಲುಕಿದ ಅಕ್ಕ ತನ್ನನ್ನು ಕಾಯುವಂತೆ ಮಲ್ಲಿಕಾರ್ಜುನನಲ್ಲಿ ಪರಿಪರಿಯಾಗಿ ಬೇಡಿದ್ದಾಳೆ. 'ಅವಾಗಳೂ ಎನ್ನ ಮಾನ ಉದರಕ್ಕೆ ಹರಿವುದು ಕಾಣಲಾರೆನಯ್ಯ ನಿಮ್ಮುವನು' ಎಂಬುದು ಆಕೆಯ ಚಿಂತೆ : "ಹಿಂದಣ ಹಳ್ಳ ಮುಂದಣ ತೊರೆ ಸಲ್ಲುವ ಪರಿಯೆಂತು.... ನೀನಿಕ್ಕಿದ ಮಾಯೆ ಕೊಲುತಪ್ಪುದು ಕಾಯಯ್ಯಾ ಕಾಯಯ್ಯಾ ಎಂಬುದು ಆಕೆಯ ಬೇಡುವಿಕಯಾಗಿದೆ.

ತಳಮಳದ ಮನವು ತಲೆಕೆಳಗಾದುದವ್ವ

ಸುಳಿದ ಬೀಸುವ ಗಾಳಿ ಉರಿಯಾಯಿತವ್ವ

ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ

ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ

ತಿಳುಹಾ ಬುದ್ಧಿಯ ಹೇಳಿ ಕರೆತಾರೆಲೆಗವ್ವ

ಚನ್ನಮಲ್ಲಿಕಾರ್ಜುನನಿಗೆ ಎರಡಱ ಮುನಿಸವ್ವ.

ಅಕ್ಕನ ವಚನಗಳ ಕೇಂದ್ರ ಬಿಂದು ಚೆನ್ನ ಮಲ್ಲಿಕಾರ್ಜುನನೆ. ಆಕೆಯ ಕಾವ್ಯಗಳ ತುಂಬೆಲ್ಲ ಆತನದೇ ನೆನಪು : ಬಗೆಬಗೆಯ ಚಿತ್ರ. ಆಕೆಯ ಜೀವಬಿಂದು : ಸಾಕಾರವಾಗಿಯೂ ನಿರಾಕರವಾಗಿಯೂ ಬಿಚ್ಚಿಕೊಳ್ಳುತ್ತಾಳೆ. ಆತ 'ವಾಙ್ಮನಕ್ಕತೀತ', 'ನಾದಾತೀತ' ಮತಿಗತೀತ'ನಾದ ಸರ್ವಾಂಗಪರಿಪೂರ್ಣನೆಂದು ಆಕೆಗೆ ಅನ್ನಿಸುವುದುಂಟು. [illegible] 'ಎಡೆಯಿಲ್ಲದ ಕಡೆಯಿಲ್ಲದ ಸಲ್ಲ'ನೆಂದೂ '[illegible]'ನೆಂದೊಡೆ ಹಿಡಿಗೆ

ಬಾರನವ್ವ, ತಡೆವೆನೆಂದೊಡೆ ಮೀರಿ ಹೋದನವ್ವ' ಎಂದೂ ಹಿಡಿಯಲು ಹೋಗಿ ವಿಫಲಳಾಗಿರುವ ಚಿತ್ರಗಳನ್ನು ನೀಡಿದ್ದಾಳೆ.

## 4.3 ಕನ್ನಡ ಸಾಹಿತ್ಯಕ್ಕೆ ವಚನ ಸಾಹಿತ್ಯದ ಕೊಡುಗೆ

ವಚನ ಸಾಹಿತ್ಯ ಕನ್ನಡಕ್ಕೆ ನಾಡಿಗೆ ನೀಡಿದ ಕೊಡುಗೆ ಅತಿಶಯವಾದುದಾಗಿದೆ. ನೂತನ ಆಂದೋಲನದಿಂದ ರೂಪಗೊಂಡ ಹೊಸ ಸಮುದಾಯದ ಆಶೋತ್ತರಗಳಿಗೆ ಸ್ಪಂದಿಸಿದ್ದು ವಚನ ಸಾಹಿತ್ಯದ ವಿಶೇಷವಾಗಿದೆ. ವಚನ ಸಾಹಿತ್ಯ ಚಳವಳಿ ಕನ್ನಡ ಸಾಹಿತ್ಯ ರಂಗದ 'ಭಕ್ತಿಚಳವಳಿ' ಎಂದು ಗುರುತಿಸಲ್ಪಟ್ಟಿದೆ. ಶರಣರೂ ಅನುಭಾವಿಗಳೂ ಆದ ಸಂತರಿಂದ ನಡೆದುದು ಈ ಅಂದೋಲನ.

ಇಂತಹ ಆಂದೋಲನಕ್ಕೆ ಒಂದು ಹಿನ್ನೆಲೆಯಿತ್ತು ಎಂಬುದನ್ನು ನಾವು ಈಗಾಗಲೇ ಗಮನಿಸಿದ್ದೇವೆ. ಧಾರ್ಮಿಕವಾಗಿ ಒಂದು ಕಾಲಕ್ಕೆ ಉಚ್ಛ್ರಾಯಸ್ಥಿತಿಯಲ್ಲಿದ್ದ ಭೌದ್ಧ, ಜೈನ ಹಿಂದೂ ಧರ್ಮಗಳು ತಮ್ಮ ತಮ್ಮ ಮೂಲೋದ್ದೇಶಗಳನ್ನು ಮರೆತು ವ್ಯರ್ಥಾಚರಣೆಗಳಿಗೆ ಅಂಟಿಕೊಂಡಿದ್ದವು. ಜನ ಸಾಮಾನ್ಯರನ್ನು ನಿರ್ಲಕ್ಷಿಸಿದ್ದವು. ಸಾಮಾನ್ಯ ಜನರು ಆಧ್ಯಾತ್ಮ, ಆತ್ಮೋನ್ನತಿಗಳಿಂದ ವಂಚಿತರಾಗಿದ್ದರು. ಜಾತಿ, ಕುಲ, ಆರ್ಥಿಕ ತಾರತಮ್ಯಗಳನ್ನು ಅವಲಂಬಿಸಿ ಉದ್ಧಾರ ಮಾರ್ಗ ಕಲ್ಪಿತವಾಗುತ್ತಿತ್ತು. ಇಂತಹ ವಿಪರ್ಯಾಸದಿಂದ ಬಹುಸಂಖ್ಯಾತರಾಗಿದ್ದ ಸಾಮಾನ್ಯಜನತೆ ಬೇಸತ್ತಿತ್ತು. ಅಸ್ತಿತ್ವದಲ್ಲಿದ್ದ ಶಿಷ್ಟಧರ್ಮಗಳು, ಪಂಥಗಳು ಜನಸಾಮಾನ್ಯರ ಆಧ್ಯಾತ್ಮಿಕ ಅವಶ್ಯಕತೆಯನ್ನು ಪೂರೈಸುವ ಸ್ಥಿತಿಯಲ್ಲಿ ಇರಲಿಲ್ಲ. ಮೋಕ್ಷಮಾರ್ಗ ಎಲ್ಲರಿಗೂ ತೆರೆಯುವ ವಿಧಾನವೊಂದು ಹುಟ್ಟಬೇಕಾದ ಪರಿಸ್ಥಿತಿಯಿತ್ತು. ಧಾರ್ಮಿಕ ರಂಗದಲ್ಲಿ ಒಡಮೂಡಿದ್ದ ತಾರತಮ್ಯಗಳನ್ನು ಒರೆಸಿಹಾಕಿ, ಕಠಿಣ ಮಾರ್ಗವನ್ನು ನಿವಾರಿಸಿ, ಎಲ್ಲರಿಗೂ ಮುಕ್ತವಾಗಿ ತೆರೆದ ಸರಳಮಾರ್ಗವೊಂದು ಉಗಮಿಸಿಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿತ್ತು. ಇಸ್ಲಾಂ ಧರ್ಮದ ಆಕ್ರಮಣ ಶೀಲತೆಯೂ ಜನತೆಯ ಭೀತಿಗೆ ಕಾರಣವಾಗಿತ್ತು. ಇಂತಹ ಸಮಯದಲ್ಲಿ ತಮಿಳುನಾಡಿನಲ್ಲಿ ಪ್ರಾರಂಭವಾಗಿದ್ದ ಭಕ್ತಿಯ ಆಂದೋಲನ ಕನ್ನಡದ ಶರಣರಿಂದ ರಾಷ್ಟ್ರಾದ್ಯಂತ ಹರಡಿತು. ಕನ್ನಡನಾಡಿನಲ್ಲಿ ಬೇರೆಲ್ಲೂ ನಡೆಯದಷ್ಟು ವ್ಯಾಪಕವಾಗಿ ನಡೆದ ವೈಚಾರಿಕ ಕ್ರಾಂತಿ ಜಾಗೃತಿ ವಚನಕಾರರಿಂದ, ವಚನಗಳ ಮೂಲಕ ನಡೆದುದು ವಿಶೇಷ ಸಂಗತಿಯಾಗಿದೆ.

ಶಿಷ್ಟ ವರ್ಗದವರಿಗೆ ಸೀಮಿತವಾಗಿದ್ದ ಜೈನ ಹಾಗೂ ವೈಷ್ಣವದೇವತೆಗಳಿಗಿಂತ, ತೀರ ಕೆಳವರ್ಗದ ಜನರು ನಂಬಿಕೊಂಡಿದ್ದ ಅಸಂಖ್ಯಾತ ಜನಪತದ ದೇವತೆಗಳಿಗಿಂತ ಭಿನ್ನವಾಗಿ, ವೀರಶೈವ ಧರ್ಮ ಶಿವಭಕ್ತಿಯ ಮೂಲಕ ಶಿವತತ್ವವೇ ಪರಮತತ್ವವೆಂದು ಸಾರಿತು. ಸಮಾಜವನ್ನು ಛಿದ್ರಗೊಳಿಸಿದ್ದ ವಿವಿಧ ಧರ್ಮಪಂಥಗಳ ಬದಲು, ಏಕದೇವತಾ ಆರಾಧನೆಯ ಮೂಲಕ ಸರ್ವರನ್ನೂ ಸಮಾನ ತಳಹದಿಯ ಮೇಲೆ ಒಗ್ಗೂಡಿಸಿದ್ದು ವೀರಶೈವ ಭಕ್ತಿ ಆಂದೋಲನದ ವಿಶೇಷತೆಯಾಗಿದೆ. ವೀರಶೈವ ಧರ್ಮ ಛತ್ರದಡಿ ನಡೆದ ಈ ಆಂದೋಲನ ಧಾರ್ಮಿಕ ರಂಗಕ್ಕೆ ಸೀಮಿತವಾಗಿ ಉಳಿಯದೆ ಸಾಮಾಜಿಕ, ಸಾಹಿತ್ಯಿಕರಂಗಕ್ಕೂ ದಾಂಗುಡಿಯಿಟ್ಟಿದೆ.

ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ಹರಡಿದ್ದ ವಿವಿಧ ಶೈವ ಪ್ರಭೇದಗಳಲ್ಲಿನ ನ್ಯೂನತೆಗಳನ್ನು ನಿವಾರಿಸಿಕೊಂಡು ಅವತರಿಸಿದ ವೀರಶೈವ ಧರ್ಮಕ್ಕೆ ನೇತಾರನಾಗಿ ನಿಂತು ಸಂಘಟನೆ ಮಾಡಿದವನು ಬಸವಣ್ಣ. ಬಿಜ್ಜಳನಲ್ಲಿ ಭಂಡಾರಿಯಾಗಿದ್ದ ಬಸವಣ್ಣನಿಂದ ವೀರಶೈವ ಆಂದೋಲನ ಉಜ್ವಲವಾಯಿತು. ಮಹಾಸಾಧಕನಾದ ಅಲ್ಲಮ, ತಾರ್ಕಿಕ ಚನ್ನ ಬಸವಣ್ಣ, ಕರ್ಮಯೋಗಿ ಸಿದ್ಧರಾಮ, ಸದ್ಭಕ್ತೆ ಮಹಾದೇವಿ ಇಂತಹವರು ಇದಕ್ಕೆ ಬೆನ್ನೆಲುಬಾಗಿ ನಿಂತಿದ್ದಾರೆ. ಅಷ್ಟೇ ಲ್ಲ ಮಡಿವಾಳ, ತುರುಗಾಹಿ, ಬೇಡ, ಬಹುರೂಪಿ, ಹಡಪದವ, ತಳವಾರ, ಉಳುವವ, ನೇಯ್ಗೆಯವ, ನೂಲುವವ, ಬಡಗಿ ಹೀಗೆ ಸಮಾಜದ ಎಲ್ಲ ಸ್ತರಗಳ, ಎಲ್ಲ ಕಾಯಕದ ಸ್ತ್ರೀ ಪುರುಷರು ಸಮಾನ ಸ್ಕಂದರಾಗಿ ಒಂದುಗೂಡಿ ಶ್ರಮಿಸಿದ್ದಾರೆ. ಈ ಶರಣರ ವೈಚಾರಿಕ ಕ್ರಾಂತಿಗೆ ಕಲ್ಯಾಣವೆ ಕೇಂದ್ರಸ್ಥಾನವಾಗಿತ್ತು.

ಹಳೆಯ ಶೈವ ಪಂಥಗಳ ತಾತ್ವಿಕ ಪರಿಭಾಷೆಯನ್ನೂ ಆಚರಣೆಗಳನ್ನೂ, ಒಂದುಗೂಡಿಸಿಕೊಂಡು ಪೂರಕವಾದ ಹೊಸ ವಿಷಯಗಳೊಂದಿಗೆ ಜನ್ಮತಾಳಿದ್ದು ವೀರಶೈವಧರ್ಮ. ಜನಸಾಮಾನ್ಯರೆಲ್ಲರನ್ನೂ ಒಂದು ಗೂಡಿಸಲು, ಆತ್ಮೋನ್ನತಿಯ ಮಾರ್ಗದಲ್ಲಿ ಕೊಂಡೊಯ್ಯಲು ಅದು ಇಷ್ಟಲಿಂಗ ಧಾರಣೆ, ಅಷ್ಟಾವರಣ, ಹಾಗೂ ಷಟ್ಸ್ಥಲಗಳನ್ನು ಪ್ರಮುಖ ತತ್ವಗಳನ್ನಾಗಿ ಸ್ವೀಕರಿಸಿತು.

ಸಾಧಕನ ಮನೋವಿಕಾಸದ ವಿವಿಧ ನೆಲೆಗಳನ್ನು ಆಧರಿಸಿರುವ ಷಟ್‌ಸ್ಥಲಗಳಲ್ಲಿ ಮೊದಲಸ್ಥಲ ಭಕ್ತಸ್ಥಲ. ಭಕ್ತಿಮಾರ್ಗ ಎಲ್ಲರಿಗೂ ಸುಲಭವಾಗಿ ವೇದ್ಯವಾಗುವುದು. ಆದುದರಿಂದ ಶರಣರುಈ ಭಕ್ತಿಮಾರ್ಗವನ್ನು ಅವಲಂಬಿಸಿ ಧಾರ್ಮಿಕ, ಸಾಮಾಜಿಕ ಸುಧಾರಣೆಗಳನ್ನು ಸಾಧಿಸಲು ಮುಂದಾದರು. ಪಶು-ಪತಿ, ಶರಣಸತಿ-ಲಿಂಗಪತಿ, ಮೊದಲಾದ ಭಕ್ತಿಯ ವಿವಿಧ ಮಾಧ್ಯಮವನ್ನು ಅವಲಂಬಿಸಿ ಸಾಧನೆಯನ್ನು ಮಾಡುತ್ತಾ ಸಮಾಜಕ್ಕೆ ಬೆಳಕು ಚೆಲ್ಲಿದರು. ಅವರ ಈ ಧಾರ್ಮಿಕ ಆಂದೋಲನ ಭಕ್ತ ಚಳವಳಿ ಸಂಪೂರ್ಣ ಫಲ ಸಾಧಿಸಲು ಮೂಲ ಕಾರಣ ವಚನಗಳೇ ಆಗಿವೆ. ಸರಳ ಸುಲಭ ರಚನೆಗಳಾದ ವಚನಗಳು ವಚನಕಾರರ ವೈಚಾರಿಕ ಕ್ರಾಂತಿಗೆ ಸೂಕ್ತ ತಳಹದಿಯನ್ನು ಕಟ್ಟಲು ನೆರವಾದವು. 'ಅನುಭವ ಮಂಟಪ'ದಂತಹ ಆಧ್ಯಾತ್ಮಕೇಂದ್ರ ಇದಕ್ಕೆ ಸೂಕ್ತ ವೇದಿಕೆಯಾಗಿ ನಿಂತಿತ್ತು. ಈ ಮೂಲಕ ಸರ್ವ ಸಮಾನತೆಯ ಆಶಯದ ಮೇಲೆ ಕಟ್ಟಿದ, ನೂತನ ಸಮಾಜದ ನಿರ್ಮಾಣ ಸಾಧ್ಯವಾಯಿತು. ವರ್ಗ-ಜಾತಿ-ಲಿಂಗ ಭೇದಗಳನ್ನು ಅಲ್ಲಗಳೆದು ಎಲ್ಲರೂ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ರಂಗಗಳಲ್ಲಿ ಸಾಧನೆ ಮಾಡಲು ಅವಕಾಶ ಮಾಡಿಕೊಟ್ಟಿದ್ದು ಈ ಆಂದೋಲನದ ಅತಿಶಯತೆ.

## 4.4 ವಚನ ಯುಗದ ವಿಶಿಷ್ಟತೆ

ವಚನಯುಗವನ್ನು ಕನ್ನಡ ಸಾಹಿತ್ಯೇತಿಹಾಸದಲ್ಲಿ 'ಕ್ರಾಂತಿ ಯುಗ' ಎಂದೂ ಗುರುತಿಸುವುದುಂಟು. ಒಂದೇ ಕಾಲದಲ್ಲಿ ಧಾರ್ಮಿಕ, ಸಾಮಾಜಿಕ, ಸಾಹಿತ್ಮಿಕ, ರಾಜಕೀಯ, ಸಾಂಸ್ಕೃತಿಕ ರಂಗಗಳಲ್ಲಿ ಆಂದೋಲನಗಳು ನಡೆದುದು ಈ ಯುಗದ ವಿಶೇಷಗುಣ.

ಧಾರ್ಮಿಕವಾಗಿ ವೀರಶೈವ ಜಾತಿ-ಮತ-ಲಿಂಗ-ವರ್ಗಭೇದಗಳಿಲ್ಲದೆ ಎಲ್ಲರಿಗೂ ಆಧ್ಯಾತ್ಮ ಮಾರ್ಗ ಸಾಧ್ಯ ಎಂದು ಘೋಷಿಸಿತು. ಸಂಸಾರದಲ್ಲಿದ್ದೂ, ವಿವಿಧ ಕಾಯಕಗಳಲ್ಲಿದ್ದು ಮೋಕ್ಷಸಾಧಿಸಬಹುದೆಂಬ ನೂತನ ಕಲ್ಪನೆ ಸಹಜವಾಗಿಯೇ ಸಾಮಾನ್ಯ ಜನತೆಗೆ ಪ್ರಿಯವಾಯಿತು.

ಸಾಮಾಜಿಕ ರಂಗದಲ್ಲಿ ಮೇಲು-ಕೀಳು ಎಂಬುದನ್ನು, ಜಾತಿ, ಭೇದ, ಲಿಂಗ ಭೇದಗಳನ್ನು ಕಿತ್ತೊಗೆಯುವಲ್ಲಿ ಮಹತ್ತರ ಪಾತ್ರವಹಿಸಿತು.

ರಾಜಕೀಯ ಅಸ್ತವ್ಯಸ್ತತೆಯ ಹಿನ್ನೆಲೆಯಲ್ಲಿ ಉಗಮಿಸಿದ ವೀರಶೈವದ ಅಪೂರ್ವ ಸಂಘಟನೆಯಿಂದಾಗಿ ಬಿಜ್ಜಳನ ಕೊಲೆಯಾಗುವಂತಹ ವಿಪರೀತಸ್ಥಿತಿ ನಿರ್ಮಾಣವಾಯಿತು. ಪ್ರಭುತ್ವ ಕಾಯುವಲ್ಲಿ ವಿಫಲವಾದಾಗ ಅದಕ್ಕೆ ಪಾಠಕಲಿಸಬೇಕಾದ ಅನಿವಾರ್ಯ ಪರಿಸ್ಥಿತಿ ಜನತೆಗೆ ಬರಹುದುದು ಎಂಬುದನ್ನು ಇದು ಸಾರುತ್ತದೆ.

ಸಾಹಿತ್ಯಿಕವಾಗಿ ಪ್ರೌಢಿಮೆಯನ್ನು ತೊರೆದ ಸರಳಮಾರ್ಗ, ಸಾಂಪ್ರದಾಯಿಕ ಛಂದೋಬಂಧಗಳ ನಿರಾಕರಣೆ, ಜನಸಮ್ಮುಖತೆ, ದೇಸಿಮನ್ನಣೆ, ವ್ಯಕ್ತಿಗಳ ಅನುಭವಗಳ ದಾಖಲೆ ಹೀಗೆ ವಸ್ತು, ಭಾಷೆ, ಛಂದಸ್ಸು, ನಿರೂಪಣೆಗಳಲ್ಲಿ ವಚನಗಳು ನೂತನ ಕ್ರಾಂತಿಗೆ ಕಾರಣವಾಗಿವೆ.

ಸಹಜವಾಗಿ ಇದರಿಂದ ಸಾಂಸ್ಕೃತಿಕ ರಂಗದ ಮೇಲೆ ಅತಿಶಯ ಪರಿಣಾಮವುಂಟಾಯಿತು. ಹೊಸ ಮೌಲ್ಯಗಳ ಮನ್ನಣೆ ಸ್ವೀಕಾರಗಳು ನಡೆಯ ಬೇಕಾಯಿತು. ಮುಖ್ಯವಾಗಿ ಜಾತಿ, ವರ್ಗಗಳನ್ನು ಕುರಿತ ಚಿಂತನೆ, ಸ್ತ್ರೀಯರ ನೆಲೆ, ಮೋಕ್ಷಕಲ್ಪನೆ, ಕಾಯಕ ಮಾನ್ಯತೆ, ಶೀಲದ ಸ್ವಪ್ನನೆ ಇವೇ ಮೊದಲಾದ ನರ್ತರ ಆಲೋಚನೆಗಳು ಸಮಾಜದಲ್ಲಿ ಹೊಸ ಪರಿಕಲ್ಪನೆಗಳನ್ನು ಮೂಡಿಸಲು ಸಮರ್ಥವಾದವು.

ಈ ಎಲ್ಲ ಕಾರಣಗಳಿಂದ 'ವಚನಯುಗ' ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಅತ್ಯಂತ ವಿಶೇಷಸ್ಥಾನ ಪಡೆದುಕೊಳ್ಳುತ್ತದೆ. 'ವಚನ ಸಾಹಿತ್ಯ' ಕನ್ನಡ ಸಾಹಿತ್ಯಪರಂಪರೆಯ ಅತ್ಯುನ್ನತ ಸಂವೇದನಾಶೀಲ ಅಭಿವ್ಯಕ್ತಿಯ ಫಲಗಳಾಗಿವೆ. ಸಮಾನತೆಗಾಗಿ ನಡೆದ ಒಂದು ಶಕ್ತಿಯುತ ಹೋರಾಟದ ತುಣುಕುಗಳಾಗಿ ಗೋಚರಿಸುತ್ತವೆ.

ಇಂತಹ ಉದಾತ್ತ ಆಶಯಗಳಿಂದ ಸೃಜನಗೊಂಡಿದ್ದ ವಚನ ಚಳವಳಿ ಕೆಲವು ಆಂತರಿಕ ವೈಷಮ್ಯಗಳಿಂದಾಗಿ ತನ್ನ ಕಾಲದಲ್ಲೇ ಒಡೆಯುತ್ತಾ ಬಂದು ಕೊನೆಕೊನೆಗೆ ತನ್ನ ಕಂಪನ್ನು ಮಾತ್ರ ಉಳಿಸಿ ಮರೆಯಾಯಿತು. ವಚನ ಸಾಹಿತ್ಯದ ಮೂಲಕ ಕನ್ನಡಿಗರ ಮನದಲ್ಲಿ ಚಿರಂತನವಾಗಿ ನೆಲೆಗೊಂಡಿತು.

ಸ್ತ್ರೀಯರನ್ನು ಕುರಿತು, ದಲಿತರನ್ನು ಕುರಿತು, ಕೆಳವರ್ಗದವರನ್ನು ಕುರಿತು, ಸರ್ವಸಮಾನತೆ ಹಾಗೂ ಉದ್ಧಾರವನ್ನು ಕುರಿತು ವಚನಗಳನ್ನು ಸಾರುವ ಸಂದೇಶಗಳನ್ನು ಇಂದಿಗೂ ಚಿಂತಿಸುವ, ಪರಿಭಾವಿಸುವ ಆಗತ್ಯವಿದ್ದೇ ಇದೆ. ಸಾಹಿತ್ಯಗುಣಕ್ಕಿಂತ ಅತಿಶಯವಾಗಿ ಇಂತಹ ಗುಣಾತ್ಮಕ ಕಲ್ಪನೆಗಳಿಂದಾಗಿ ವಚನ ಸಾಹಿತ್ಯ ಕನ್ನಡಿಗರಲ್ಲಿ ಅಪೂರ್ವವಾದ ಸ್ಥಾನವನ್ನು ಕಾಯ್ದುಕೊಂಡಿದೆ ಎಂಬುದು ಗಮನಾರ್ಹವಾದುದು.

## 4.5 ಸ್ವಪರೀಕ್ಷಾ ಪ್ರಶ್ನೆಗಳು

1. ಜೇಡರ ದಾಸಿಮಯ್ಯ ಯಾರು? ಅವನ ಇಷ್ಟ ದೈವದ ಹೆಸರೇನು?

.............................................................................................

.............................................................................................

.............................................................................................

2. ಅಲ್ಲಮ ಪ್ರಭುವಿನ ವಚನಗಳ ಅಂಕಿತವೇನು? ಅವನ ಕಾಲ ಮತ್ತು ಊರು ಯಾವುದು?

.............................................................................................

.............................................................................................

.............................................................................................

3. ಬಿಜ್ಜಳಯಾರು? ಇವನು ಯಾರಿಗೆ ಶಿಕ್ಷೆ ವಿಧಿಸಿದ?

.............................................................................................

.............................................................................................

.............................................................................................

4. ಬಸವಣ್ಣನವರ ಸಮಾಜದ ಕಲ್ಯಾಣ ಕಾರ್ಯಕ್ಕೆ ನೆರವಾದವರು ಯಾರು? ಅದು ಎಲ್ಲಿ?

.............................................................................................

.............................................................................................

.............................................................................................

5. ಅಕ್ಕನ ವಚನಗಳ ಅಂಕಿತ ಯಾವುದು?

.............................................................................................

## 4.6 ಸಾರಾಂಶ

ಈವರೆಗೆ ೧ನೇ ಸಂಚಿಕೆ ೪ನೇ ಘಟಕದ ಎಂ.ಪಿ.ಪಿ. ಸಾಮಗ್ರಿಯನ್ನು ಮನಗಂಡಿರಿ. ಇದು ವಚನಸಾಹಿತ್ಯದ ಮುಂದುವರೆದ ಭಾಗವೇ ಆಗಿದ್ದರೂ, ಇಲ್ಲಿ ಸಾವಿರಾರುಜನ ವಚನಕಾರರ ಸಾಹಿತ್ಯ ಪರಿಚಯಕ್ಕಿಂತ ಪ್ರಮುಖರಾದ ಕೆಲವು ಶಿವಶರಣರ ಪರಿಚಯವನ್ನು ಮಾತ್ರ ಮನಗಾಣಿಸಿದೆ. ಇದು ಸ್ಥೂಲವಾಗಿ ಆ ಕಾಲದ ಒಟ್ಟು ವಚನಕಾರರ ಧ್ಯೇಯಧೋರಣೆಗಳನ್ನು ಅರಿಯಲು ಮಾಡಿರುವ ಪ್ರಯತ್ನ ಅಷ್ಟೆ. ಇದರಿಂದ ಮತ್ತಷ್ಟು ವಿಚಾರಗಳನ್ನು ಪರಿಭಾವಿಸಲು ಅನುಕೂಲ. ಆಪ್ರಯತ್ನ ನಿಮ್ಮದಾಗಿರಲಿ.

## 4.7 ಸ್ವಪರೀಕ್ಷಾ ಪ್ರಶ್ನೆಗಳಿಗೆ ಉತ್ತರಗಳು

1. ಜೇಡರ ದಾಸಿಮಯ್ಯ ಒಬ್ಬ ಆದ್ಯವಚನಕಾರ. ಬಸವಣ್ಣ, ಅಲ್ಲಮ್ಮರಿಗಿಂತ ಹಿಂದೆ ಇದ್ದವನು. ಆರಂಭದ ವಚನಕಾರ. ಬಹುದೊಡ್ಡ ಶಿವಶರಣ. ಇವನ ಇಷ್ಟದೈವದ ಹೆಸರು 'ರಾಮನಾಥ'.

2. 'ಗುಹೇಶ್ವರ' ಎಂಬುದು ಅವನ ವಚನಗಳ ಅಂಕಿತ. ಅವನ ಕಾಲ ೧೧೬೦. ಅವನ ಊರು ಬಳ್ಳಿಗಾವೆ.

3. ಬಿಜ್ಜಳ ಕಲ್ಯಾಣದ ಚಾಲುಕ್ಯರ ಸಾಮಂತ ದೊರೆ. ಅಸ್ಪೃಶ್ಯ ಹರಳಯ್ಯ ಬ್ರಾಹ್ಮಣನಾದ ಮಧುವರಸರಿಗೆ ಶಿಕ್ಷೆಯನ್ನು ವಿಧಿಸಿದನು.

4. ಬಸವಣ್ಣನವರ ಸಾಮಾಜಿಕ ಕ್ರಾಂತಿ ಕಾಯಕಕ್ಕೆ ನೆರವು ನೀಡಿದವರು ಚೆನ್ನಬಸವಣ್ಣ, ಅಲ್ಲಮಾ, ಸಿದ್ಧರಾಮ, ಮಡಿವಾಳಮಾಚಿದೇವ, ಅಕ್ಕಮಹಾದೇವಿ ಮುಂತಾದ ಶಿವಶರಣರು. ಚಾಲುಕ್ಯರ ರಾಜಧಾನಿಯಾಗಿದ್ದ ಕಲ್ಯಾಣವೇ ಬಸವಣ್ಣನವರ ಕೇಂದ್ರಸ್ಥಾನವಾಗಿತ್ತು.

5. 'ಚೆನ್ನಮಲ್ಲಿಕಾರ್ಜುನ'.


ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಪ್ರಾದೇಶಿಕ ಹಾಗೂ ಅಧ್ಯಯನ ಕೇಂದ್ರಗಳು
Regional and Study Centres of Karnataka State Open University
Bidar 1
Gulbarga 4
Bijapur 2
Bagalakot 1
Raichur 2
Belgaum 2
Koppal
Dharwad 2
Gadag 1
Bellary 1
U. Kannada 2
Haveri 2
Davanagere 2
Shimoga 3
Chitradurga 1
Udupi 2
Chikmagalur 3
Tumkur 3
Kolar 2
D. Kannada 3
Hassan 4
Bang. 8
Mandya 3
Bang.(R.) 2
Kodagu 2
Mysore 7
Chamarajanagar 2
ಪ್ರಾದೇಶಿಕ ಕೇಂದ್ರಗಳು REGIONAL CENTRES - 08
ಅಧ್ಯಯನ ಕೇಂದ್ರಗಳು STUDY CENTRES - 67
B.Ed. STUDY CENTRES - 10
M.Ed. NODAL CENTRE - 01
M.Ed. STUDY CENTRES - 08
(ನಮೂದಿರುವ ಅಂಕಿ - ಜಿಲ್ಲೆಯಲ್ಲಿರುವ ಒಟ್ಟು ಅಧ್ಯಯನ ಕೇಂದ್ರಗಳ ಸಂಖ್ಯೆಯನ್ನು ಸೂಚಿಸುತ್ತದೆ.)
(The Number indicate the total number of study Centres existing in that districts.)

